# ಕೊಡಗು ಸಂಗಾತಿ

ಡಿಸಂಬರ್ 1 ರಿಂದ 31, 2003 ಪಾಕ್ಷಿಕ ಪತ್ರಿಕೆ (ಜಾರ್ದೆ 15-30, ಪೆರಾರ್ದೆ 1-15)

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ RNI No. : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಲಿ ಪ್ರಕಟಿತ

KA / SK / MYS / 88 / 2003-05, ಸಂಪುಟ : 7 ಸಂಚಿಕೆ : 17-18 ಪುಟಗಳು : 24 ವಾರ್ಷಿಕ : 150 ರೂ.



: ಲೇಖನ ಒಳಪುಟದಲ್ಲಿ

ಭಾರತೀಯ ಭೂಸೇನೆಯಲ್ಲಿ ಕೊಡಗಿನ ವೈದ್ಯ ದಂಪತಿಗಳು :
ಕ್ಯಾಪ್ಟನ್ ತೆಕ್ಕಡ ಪೂಣಚ್ಚ ದಿನೇಶ್ ಮತ್ತು ಲೆಫ್ಟಿನೆಂಟ್ ದರ್ಶನ್ ಕೌರ್

ನಾಡಿನ ಜನತೆ ಹಾಗೂ ಸಂಗಾತಿ ಓದುಗರೆಲ್ಲರಿಗೂ ಹುತ್ರಿಯ ಶುಭ ಹಾರೈಕೆಗಳು.

## ಶುಭಾಶಯಗಳು



ತಡಿಯಪ್ಪನ ಕುಮಾರಜಯು

ತಡಿಯಪ್ಪನ ಕುಮಾರಜಯನವರು ಪೀಪಲ್ಸ್ ಮೂವ್‌ಮೆಂಟ್ ಫಾರ್ ಹ್ಯೂಮನ್ ರೈಟ್ಸ್ (ರಿ) ನ ಮೈಸೂರು ಜಿಲಾಧ್ಯಕ್ಷರಾಗಿ ರಾಜ್ಯ ಘಟಕದಿಂದ ಆಯ್ಕೆ ಆಗಿದ್ದಾರೆ.

ಇದು ಒಂದು ರಾಷ್ಟ್ರೀಯ ಸಂಘಟನೆಯಾಗಿದ್ದು ಮಾನವ ಹಕ್ಕುಗಳಿಂದ ವಂಚಿತರಾಗಿದ್ದವರಿಗೆ ಜಾತಿ, ಮತ, ಪಂಗಡಗಳ ಬೇಧವಿಲ್ಲದೆ ನ್ಯಾಯ ದೊರಕಿಸಿ ಕೊಡುವ ಉದ್ದೇಶದಿಂದ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸಂಘಟನೆ ಪ್ರಾರಂಭಿಸಿದೆ. ಈ ಸಂಸ್ಥೆಗೆ 10 ಕುಟುಂಬ 18 ಗೋತ್ರದವರಾದ ತಡಿಯಪ್ಪನ ಕುಮಾರಜಯರವರನ್ನು ರಾಜ್ಯ ಮಟ್ಟದಲ್ಲಿ ಗುರುತಿಸಿ People Movements For Human Rights ನ ಮೈಸೂರು ಜಿಲ್ಲಾಧ್ಯಕ್ಷರಾಗಿ ರಾಜ್ಯ ಘಟಕ ಆಯ್ಕೆ ಮಾಡಿ ಸಂಘಟನೆ ಮಾಡಲು ಅಧಿಕಾರ ನೀಡಿದೆ ಎಂದು ಪ್ರಕಟಣೆಯಲ್ಲಿ ತಿಳಿಸಿದೆ.

ಈ ಸುಸಂದರ್ಭದಲ್ಲಿ, ಹೆಚ್ಚಿನ ಹುಮ್ಮಸ್ಸು ಮತ್ತು ಆಯುರಾರೋಗ್ಯವನ್ನು ನೀಡಲೆಂದು ಕುಲಗುರು ವೆಂಕಟರಮಣ ಮತ್ತು ಶಾರದಾಂಬೆಯರ ಹಾಗೂ ತಾಯಿ ಕಾವೇರಿ, ಇಗ್ಗುತಪ್ಪರ ಆಶೀರ್ವಾದ ಸದಾ ಇರಲೆಂದು ಈ ಮೂಲಕ ಶುಭವನ್ನು ಹಾರೈಸುತ್ತೇವೆ.

**-ಕುಯ್ಯುಮುಡಿ ರಾಮಪ್ಪ, ಉಪಾಧ್ಯಕ್ಷರು ಮತ್ತು ಪದಾಧಿಕಾರಿಗಳು , ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ, ಮೈಸೂರು.**

## ಡಿಸಂಬರ್ 8 ಹುತ್ತರಿ ಹಬ್ಬ

ಕೊಡಗಿನ ಮುಖ್ಯ ಹಬ್ಬ ಹುತ್ತರಿ ಹಬ್ಬವನ್ನು ಡಿಸಂಬರ್ 8 ರಂದು ಆಚರಿಸಲಾಗುವುದು. ಡಿಸಂಬರ್ 7 ರಂದು ಶ್ರೀ ಇಗ್ಗುತ್ತಪ್ಪ ಕಲಾಡ್ಚ ಹಬ್ಬವು ಕೃತಿಕಾ ನಕ್ಷತ್ರದಲ್ಲಿ ನಡೆಯಲಿದೆ. ಡಿ. 8 ರಂದು ರೋಹಿಣಿ ನಕ್ಷತ್ರದಲ್ಲಿ ಇಗ್ಗುತಪ್ಪ ದೇವಾಲಯದಲ್ಲಿ ಸಂಜೆ 7-30 ಕ್ಕೆ ನೆರೆಕಟ್ಟುವುದು. 8-30 ಕ್ಕೆ ಕದಿರು ತೆಗೆಯುವುದು. ಬಳಿಕ ಪ್ರಸಾದ ಸ್ವೀಕಾರಕ್ಕೆ ಶುಭ ಘಳಿಗೆಯಾಗಿದೆ.

ಕೊಡಗು ನಿವಾಸಿಗಳು ಡಿ. 8 ರ ರಾತ್ರಿ 8 ಘಂಟೆಗೆ ನೆರೆ ಕಟ್ಟುವುದು, ರಾತ್ರಿ 9 ಘಂಟೆಗೆ ಕದಿರು ತೆಗೆಯುವುದು, 10ಕ್ಕೆ ಊಟಕ್ಕೆ ಶುಭವೆಂದು ತಿಳಿದುಬಂದಿದೆ

-ಸಂಗಾತಿ.

***ಉದ್ಯೋಗ ವಾರ್ತೆ : D.G.Q.A. ನಲ್ಲಿ ಚಾರ್ಜ್‌ಮ್ಯಾನ್ ಹುದ್ದೆಗಳು - 20, ಏರ್ ಫೋರ್ಸಿನಲ್ಲಿ 93 ಹುದ್ದೆಗಳು, ವಿವರಗಳಿಗಾಗಿ ನವಂಬರ್ -30 ರ ಉದ್ಯೋಗ ಮಾರ್ಗದರ್ಶಿ ವಾರಪತ್ರಿಕೆಯನ್ನು ನೋಡಬಹುದು.***



ಪಟ್ಟಡ ದೀಪಕ್ ಜಯರಾಮ್

ಜನನ : 13-2-1980

ಮರಣ : 12-11-2003

(ಎಂ. ಸಿ. ಎ. ಅಂತಿಮ ವರ್ಷ)

## ಕೃತಜ್ಞತೆಗಳು

ನಮ್ಮ ಏಕೈಕ ಪುತ್ರ ದೀಪಕ್ ದಿನಾಂಕ 12-11-2003 ರಂದು ಮಂಡ್ಯ ಸಮೀಪ ಸಂಚರಿಸುತ್ತಿದ್ದ ರೈಲಿನಿಂದ ನಿಯಂತ್ರಣ ತಪ್ಪಿ ಆಕಸ್ಮಿಕವಾಗಿ ಕೆಳಗೆ ಬಿದ್ದು ದುರ್ಮರಣವನ್ನಪ್ಪಿದ ಈ ಸಂದರ್ಭದಲ್ಲಿ ನಮ್ಮ ಬಂಧುಗಳು, ಆಪ್ತರು, ಹಿತೈಷಿಗಳು, ನೆಂಟರಿಷ್ಟರು, ಮಗನ ಸ್ನೇಹಿತ ಬಳಗದವರು ಬಂದು ಆತನ ಅಪರ ಕ್ರಿಯಾಧಿಗಳಲ್ಲಿ ಪಾಲ್ಗೊಂಡು ಸಹಕರಿಸಿದ ನಿಮ್ಮೆಲ್ಲರ ಪ್ರೀತಿ, ವಿಶ್ವಾಸ, ಸಹಕಾರಗಳಿಗೆ ನಾವು ಮತ್ತು ನನ್ನ ಸಂಸಾರಿಗರು ಎಲ್ಲರೂ ಅಭಾರಿಗಳು.

ವಂದನೆಗಳು

*-ತಂದೆ : ಪಟ್ಟಡ ಜಯರಾಮ್,*

*ತಾಯಿ : ಪೂವಮ್ಮ, ಅಕ್ಕ : ದಿವ್ಯ,*

*ಬಾವ : ಪೊನ್ನಚನ ಶಶಿಕಾಂತ್,*

*ತಂಗಿ : ಉಷಾ, ಮೈಸೂರು -17*

***ದೂರವಾಣಿ : 2303085***



# 2003, ಡಿಸಂಬರ್ 1 ರಿಂದ 31ರ ತನಕ






| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | ಕೊಡಗು ಸಂಗಾತಿ, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. ಫೋನ್: **0821/2404290**<br>ಕುಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್ ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **Mobile : 94483-90855** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ: ಚಿಹ್ನೆ, ಹಸೆಮಣೆ ಪುಸ್ತಕ / ಚಾಂಪಾ ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಇತ್ಯಾದಿಗಳು ಲಭ್ಯ. | ಕೊಡಗು ಸಂಗಾತಿ C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201 ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : 228047<br>ಪಾಂಡನ ರತಿ ಚಂದ್ರಶೇಖರ್ ಫೋನ್ : **228380** |
| ವಿರಾಜಪೇಟೆ | ಚಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/256591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/273370 |
| ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೆಸಿನಗರ, ಬೆಂಗಳೂರು -560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ. ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ),

ಕೊಡಗು ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಸ್ನೇಹ ಕಾವೇರಿಯಲ್ಲಿ ಅರೆಭಾಷೆ

ಮಡಿಕೇರಿ ಆಕಾಶವಾಣಿ ಕೇಂದ್ರದ ವತಿಯಿಂದ ಪ್ರತಿ ಶುಕ್ರವಾರ ಮಧ್ಯಾಹ್ನ 2-35 ಕ್ಕೆ "ಸ್ನೇಹ ಕಾವೇರಿ" ವಿಶೇಷ ಬಾನುಲಿ ಕಾರ್ಯಕ್ರಮವು ನೂತನವಾಗಿ ದಿನಾಂಕ 7-11-2003 ರಿಂದ ಪ್ರಾರಂಭವಾಗಿದೆ. ತಿಂಗಳ ಮೊದಲ ಶುಕ್ರವಾರ ಅರೆಭಾಷೆ, ಎರಡನೆ ಶುಕ್ರವಾರ ತುಳು, ಮೂರನೇ ಶುಕ್ರವಾರ ಕೊಡವ, ನಾಲ್ಕನೇ ಶುಕ್ರವಾರ ಮಲೆಯಾಳಂ ಭಾಷಾ ಕಾರ್ಯಕ್ರಮವು ಜರುಗಲಿದೆ ಎಂದು ನಿಲಯದ ನಿರ್ದೇಶಕಿ ಇಂದಿರಾ ಗಜರಾಜ್ ನವರು ತಿಳಿಸಿರುತ್ತಾರೆ.

***ಆಕಾಶವಾಣಿ ಕೇಂದ್ರದಲ್ಲಿ ಅರೆಭಾಷೆಗೆ ಮಾನ್ಯತೆ,***

*ಪ್ರಿಯ ಓದುಗರೆ :* ಈ ಮೇಲಿನ ಪ್ರಕಟಣೆಯನ್ನು ಓದಿದಾಗ ನಿಮ್ಮಲ್ಲಿ ಯಾವುದಾದರೊಂದು ಆಲೋಚನೆ ಬಂದಿದೆಯೆ? ಬಂದಿದ್ದರೆ ಸಂತೋಷ, ಬಾರದಿದ್ದರೂ ಚಿಂತೆ ಬೇಡ. ತಿಳಿಸಲೆಂದೇ ನಾವಿದ್ದೇವೆ. ಅರೆಭಾಷಾ ಬೆಳವಣಿಗೆಯಲ್ಲಿ ಇದೊಂದು ಮೈಲಿಗಲ್ಲು. ಆ ಮೂಲಕ ಅರೆಭಾಷೆಯನ್ನು ತಮ್ಮ ಸಂಸ್ಕೃತಿಯಲ್ಲಿ ಮೇಳೈಸಿಕೊಂಡು ಮಾತನಾಡುತ್ತಿರುವ ಗೌಡ ಜನಾಂಗವರಿಗೆ ಸಂದ ಮಾನ್ಯತೆ. ಏಕೆಂದರೆ ಇದೇ ಕಳೆದ 7-8 ವರ್ಷಗಳ ಹಿಂದೆ ಇದೊಂದು ಭಾಷೆಯೇ ಅಲ್ಲ ಎಂದೂ ಆ ಭಾಷಾ ಮಾಧ್ಯಮದ ಮೂಲಕ ಕಾರ್ಯಕ್ರಮಗಳನ್ನು ಬಿತ್ತರಿಸುವುದನ್ನು ಅಲ್ಲಗೆಳೆಯುತ್ತಿದ್ದ ಅದೇ ಆಕಾಶವಾಣಿ ಕೇಂದ್ರ ಇಂದು ಅರೆಭಾಷೆಯಲ್ಲಿ ತಿಂಗಳಿಗೆ ಅರ್ಧ ತಾಸು ಕಾರ್ಯಕ್ರಮ ಗಳನ್ನು ಪ್ರಸಾರ ಮಾಡಲು ಅವಕಾಶ ಕಲ್ಪಿಸಿದೆ ಎಂದರೆ ಅರೆಭಾಷೆ ಜೀವಂತ ಭಾಷೆಯಾಗಿ ಬೆಳೆಯುತ್ತಿರುವುದರ ಪ್ರತೀಕವಲ್ಲವೆ?

ಇಷ್ಟಕ್ಕೂ ಅರೆಭಾಷೆ ಎಂದರೆ ಯಾವುದು? ದ್ರಾವಿಡ ಭಾಷೆಯಿಂದ ಕವಲೊಡೆದ ಕನ್ನಡದ ಮೂಲ ರೂಪ. ಕಾಲಾಂತರದಲ್ಲಿ ಅನ್ಯರ ಭಾಷಾ ಪ್ರಭಾವಕ್ಕೊಳಗಾಗಿ ಕನ್ನಡ ನವೀಕರಣಗೊಂಡು ಇಂದಿನ ಆಧುನಿಕ ಕನ್ನಡವಾಯಿತು. ಆದರೆ ಹೊರ ಜಗತ್ತಿನ ಸಂಪರ್ಕ ಅಷ್ಟಾಗಿರದ ಪಶ್ಚಿಮ ಘಟ್ಟ ಗುಡ್ಡಗಳಲ್ಲಿ ಕನ್ನಡ ಬದಲಾಗಲಿಲ್ಲ. ಅದೇ ಅರೆಭಾಷೆ. ಅರೆಭಾಷೆಯಲ್ಲಿ ಇಂದು ಹಲವು ಕೃತಿಗಳುಂಟು. ಅರೆಭಾಷೆಯನ್ನು ಬಳಸುವ 5 ಲಕ್ಷ ಜನಸಂಖ್ಯೆಯುಂಟು. ಇಂದು ಅರೆಭಾಷೆ ಕನ್ನಡಕ್ಕಿಂತ ಭಿನ್ನ ಎಂಬುದನ್ನು ವ್ಯಾಕರಣಾರ್ಥಗಳಲ್ಲೂ ಸಾಧಿಸಿ ತೋರಿಸಬಹುದು. ಯಾವುದೇ ಒಂದು ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಕೆಲಸವನ್ನು ಸ್ಥಳೀಯ ಆಕಾಶವಾಣಿ ಕೇಂದ್ರಗಳು ಮಾಡಬೇಕು. ಈ ದಿಶೆಯಲ್ಲಿ ಮಡಿಕೇರಿ ಆಕಾಶವಾಣಿ ಕೇಂದ್ರದ ಪ್ರಯತ್ನ ಶ್ಲಾಘನೀಯ.

ನಿಮ್ಮ ಕೊಡಗು ಸಂಗಾತಿ ಏಳೆಂಟು ವರ್ಷಗಳ ಹಿಂದೆಯೇ ಕಂಡಿದ್ದ ಕನಸಿದು. ಅದಿಂದು ಹಂತ ಹಂತವಾಗಿ ನನಸಾಗುತ್ತಿದೆ. ಈ ಸಾಧನೆಯಲ್ಲಿ ಕೊಡಗು ಸಂಗಾತಿ ಮತ್ತು ಕೊಡಗು ಗೌಡ ಮಹಿಳಾ ಒಕ್ಕೂಟದ ಪಾತ್ರ ಕಿಂಚಿತ್ತಾದರೂ ಇದೆ ಎಂಬ ಭಾವನೆ ನಿಮ್ಮಲ್ಲಿ ಮೂಡಿದರೆ ನಾವು ಧನ್ಯ.

## ಗೌಡ ಸಂಸ್ಕೃತಿ ಬಗ್ಗೆ ಸಂಶೋಧನೆ ನಡೆಯಬೇಕು.

ಗೌಡರ ಮದುವೆಗಳಲ್ಲಿ ನಡೆಯುವ ಶಾಸ್ತ್ರಗಳ ವಿಷಯದಲ್ಲಿ ಸಂಶೋಧನೆಯ ಪರಿಪಾಠವಾಗಬೇಕು. ಉದಾಹರಣೆಗೆ ಕೊಡಗಿನಲ್ಲಿ ಸೋದರ ಮಾವ ಕಾಸ್ತಾಳಿ ಕಟ್ಟುವುದಕ್ಕೆ ಕಾರಣವೇನು? ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗ್ರಾಮ ಗೌಡನು ಮುಹೂರ್ತದ ಮಣಿಯನ್ನು ಯಾಕೆ ಕಟ್ಟುವುದು? ಕೊಡಗಿನ ಪದ್ಧತಿಗೂ ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಈ ಪದ್ಧತಿಯಲ್ಲಿ ವ್ಯತ್ಯಾಸ ಇರುವುದಕ್ಕೆ ಕಾರಣವೇನು? ವಧು ಯಾ ವರ ಸ್ನಾನ ಮಾಡಿ ಚಪ್ಪರದಲ್ಲಿ ಬಂದು ನಿಂತಾಗ ಮುತ್ತೈದೆಯರು ಆರತಿಯನ್ನು ಯಾಕೆ ಎತ್ತುತ್ತಾರೆ? ಒಂದೊಂದು ಶಾಸ್ತ್ರಕ್ಕೆ ಇಷ್ಟಿಷ್ಟೇ ಆರತಿಗಳಾಗಬೇಕೆಂದು ಯಾರು ಹೇಳಿಕೊಟ್ಟರು? ಎಣ್ಣೆ ಶಾಸ್ತ್ರ ಯಾಕೆ ಮಾಡಬೇಕು? ಎಣ್ಣೆ ಶಾಸ್ತ್ರಕ್ಕೆ ಇಂತಹ ವಸ್ತುಗಳನ್ನೇ ಉಪಯೋಗಿಸಬೇಕೆಂದು ಯಾಕೆ ವಿಧಿಸಲಾಗಿದೆ? ಅಕ್ಕಿ ಹಸೆಯನ್ನು 5 ಜನ ಮುತ್ತೈದೆಯರು ಏಕೆ ಬರೆಯಬೇಕು? ವೀಳ್ಯ ಶಾಸ್ತ್ರದಲ್ಲಿ ಒಂದೊಂದು ವೀಳ್ಯಕ್ಕೆ ಇಷ್ಟಿಷ್ಟೇ ವೀಳ್ಯ ಬೇಕೆಂದು ನಿರ್ಧರಿಸಿದವರ್‍ಯಾರು? ವೀಳ್ಯ ಶಾಸ್ತ್ರದ ಅರ್ಥವೇನು? ಎಂಬುದಾಗಿ ಈ ಎಲ್ಲಾ ಶಾಸ್ತ್ರಗಳ ವಿವರಗಳ ವಿಷಯದಲ್ಲಿ ವೈಜ್ಞಾನಿಕವಾಗಿ ತುಲನೆ ಮಾಡಿ ಸಂಶೋಧನೆಯಾಗಿ ಈ ಪದ್ಧತಿಗಳು ವೈಜ್ಞಾನಿಕವಾಗಿವೆಯೇ ಎಂಬುದನ್ನು ದೃಢಪಡಿಸುವ ಸಂಶೋಧನೆ ಅಗತ್ಯ ಆಗಬೇಕು. ಗೌಡರ ಬಗ್ಗೆ ಧಾರ್ಮಿಕವಾಗಿಯೂ, ಶೈಕ್ಷಣಿಕವಾಗಿಯೂ, ಸಾಂಸ್ಕೃತಿಕವಾಗಿಯೂ, ನೈತಿಕ ಮೌಲ್ಯಗಳ ಬಗ್ಗೆ ಅಡಿಯಿಂದ ಮುಡಿಯವರೆಗೆ ಎಲ್ಲಾ ರೀತಿಯ ಉತ್ಖನನವಾಗಬೇಕು. ಸಿಗುವುದಯ್ಯಾ ನಿಧಿ ಅದರಡಿಯಲ್ಲಿ. ಇದು ನಿಶ್ಚಿತವೆಂದು ಸಂಗಾತಿಗರಿವಿಗೆ ಬರುತ್ತಿದೆ.

ಮೌನಂ ಪಂಡಿತ ಲಕ್ಷಣಂ, ಉದ್ಯೋಗಂ ಪುರುಷ ಲಕ್ಷಣಂ

# 31-10-1837 ಹುತಾತ್ಮರ ದಿನ, ಹುತಾತ್ಮರಿಗೆ ಸ್ಮಾರಕ, ಶಿಕ್ಷೆಗೊಳಗಾದವರಿಗೆ ವೀರವನ ನಿರ್ಮಾಣಕ್ಕಾಗಿ ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಕೆ.



ಗುಡ್ಡೆಮನೆ ರಮೇಶ್, ಸಂಚಾಲಕರು

ದಿನಾಂಕ 24-10-2003 ರಂದು ಮೇಲಿನ ಸಮಿತಿಯ ಜನಾಂಗದ ವಿವಿಧ ಸಂಘ ಸಂಸ್ಥೆಗಳೊಂದಿಗೆ ಜಂಟಿ ಸಭೆಯಲ್ಲಿ ಭಾಗವಹಿಸಿ ಚರ್ಚಿಸಿ, ಈ ವರ್ಷದ ಸಂಸ್ಮರಣೆಯ ಕಾರ್ಯವನ್ನು ಹುತಾತ್ಮ ಸುಭೇದಾರ್ ಗುಡ್ಡೆಮನೆ ಅಪ್ಪಯ್ಯಗೌಡ ಸಂಸ್ಮರಣೆ ಸಮಿತಿಯೇ ನಡೆಸಬೇಕೆಂದು ಮತ್ತು ಇದರ ಜವಾಬ್ದಾರಿಯನ್ನು ಶ್ರೀ ಗುಡ್ಡೆಮನೆ ರಮೇಶ್, ಸಂಚಾಲಕರು ವಹಿಸಿಕೊಳ್ಳುವಂತೆ, ತೀರ್ಮಾನಿಸಲಾಯ್ತು ಹಾಗೂ ಸಂಘ ಸಂಸ್ಥೆಗಳು ಧನ ಸಹಾಯ ನೀಡಲು ಕೋರುವಂತೆ ನಿರ್ಣಯಿಸಲಾಯ್ತು.

*ದಿನಾಂಕ 28-10-2003 ಪತ್ರಿಕಾಗೋಷ್ಠಿ : ಸಮಿತಿ ಸಂಚಾಲಕ ಗುಡ್ಡೆಮನೆ ರಮೇಶ್, ವಿವರಣೆ :* ಗುಡ್ಡೆಮನೆ ಅಪ್ಪಯ್ಯಗೌಡರು, ವೀರಮರಣವನ್ನಪ್ಪಿ, 166 ವರ್ಷಗಳೇ ಕಳೆದರೂ ಅವರ ಗೌರವಾರ್ಥ ಸರಕಾರ ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಳ್ಳದಿರುವುದು ದುರದೃಷ್ಟಕರ. 1985 ರಲ್ಲಿ ಮಡಿಕೇರಿ ಜೂನಿಯರ್ ಕಾಲೇಜ್‌ನಿಂದ ಗೌಡ ಸಮಾಜಕ್ಕೆ ತೆರಳುವ ರಸ್ತೆಗೆ ಸ್ವಾತಂತ್ರ್ಯ ಹೋರಾಟಗಾರ ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆ ಎಂದು ಅಂದಿನ ಪುರಸಭೆ ನಾಮಕರಣ ಮಾಡಿದ್ದರೂ, ಇದುವರೆಗೆ ಸೂಕ್ತ ರೀತಿಯ ನಾಮಫಲಕ ಅಳವಡಿಸುವಲ್ಲಿ ಮುಂದಾಗಿಲ್ಲ. ಈ ನಿಟ್ಟಿನಲ್ಲಿ ಕೊಡಗು ಗೌಡ ಸಮಾಜವು ಪ್ರಸ್ತುತ ಈ ನಾಮಫಲಕವನ್ನು ಸುಭೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ ರಸ್ತೆ ಎಂದು ಪುನರ್ ನಾಮಕರಣ ಮಾಡಿ ನಾಮಫಲಕ ಅಳವಡಿಸುವ ಮೂಲಕ ಶ್ಲಾಘನೀಯ ಕಾರ್ಯ ಕೈಗೊಂಡಿದೆ.

*ಶೌರ್ಯ ಪ್ರಶಸ್ತಿ :* ಈ ಸಮಿತಿವತಿಯಿಂದ ಮುಂದಿನ ವರ್ಷಗಳಲ್ಲಿ ಭಾರತದ ಗಡಿ ಪ್ರದೇಶಗಳಲ್ಲಿ ಹಾಗೂ ಯಾವುದೇ ಅಪ್ರತಿಮ ಸಾಹಸ ತೋರಿ ವೀರಮರಣವನ್ನಪ್ಪುವ ಜಿಲ್ಲೆಯ ಯೋಧರಿಗೆ ಮರಣಾ ನಂತರ ಶೌರ್ಯಪ್ರಶಸ್ತಿ ನೀಡುವ ಉದ್ದೇಶ ಹೊಂದಿದೆ. ಈ ಕಾರ್ಯಕ್ಕೆ ಸರಕಾರದಿಂದಲೂ ನೆರವು ಕೋರಲಾಗುವುದು.

*ದಿನಾಂಕ 31-10-2003 ರ ದಿನಾಚರಣೆ:* ಈ ಕಾರ್ಯಕ್ರಮವು ಪೂರ್ವಾಹ್ನ 11-00 ಘಂಟೆಗೆ ಸರಿಯಾಗಿ ಸಮಿತಿ ಸಂಚಾಲಕರಾದ ಶ್ರೀ ಗುಡ್ಡೆಮನೆ ರಮೇಶ್ ರವರ ಮೂಲಕ ದಿನದ ಕಾರ್ಯ ಕಲಾಪಗಳ ವಿವರವಾದ ಮಾಹಿತಿ ನೀಡುವುದರೊಂದಿಗೆ ಪ್ರಾರಂಭವಾಯಿತು.

*ಈ ಬಾರಿಯ ವಿಶೇಷತೆ:* ಮೊದಲಿಗೆ ಜಿಲ್ಲೆಯ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಬೈತಡ್ಕ ದೇವಯ್ಯ ಹಾಗೂ ಜಿಲ್ಲೆಯ ಹಿರಿಯ ಮಾಜೀ ಮಂತ್ರಿಗಳಾದ ಶ್ರೀ ಡಿ. ಎ. ಚಿಣ್ಣಪ್ಪನವರು ಜಂಟಿಯಾಗಿ ಹುತಾತ್ಮರ ದಿವ್ಯಾತ್ಮಕ್ಕೆ 'ಹೂಗುಚ್ಛ' ಇಡುವುದರೊಂದಿಗೆ ಕಾರ್ಯ ಕ್ರಮಕ್ಕೆ ಚಾಲನೆ ನೀಡಿದರು. ತದನಂತರ ಹುತಾತ್ಮರ ಆತ್ಮಕ್ಕೆ '2' ನಿಮಿಷಗಳ ಕಾಲ ಮೌನ ಆಚರಿಸಲಾಯ್ತು. ಸಂಸ್ಮರಣೆಯಲ್ಲಿ ಸಮಿತಿ ಸದಸ್ಯರಾದ ಶ್ರೀ ಕೆ. ಆರ್. ವಿದ್ಯಾಧರ್, ವಕೀಲರು ಪ್ರಾಸ್ತಾವಿಕವಾಗಿ 1837 ರ ಕಾಲಘಟ್ಟದ ಸ್ವಾತಂತ್ರ್ಯ ಪೂರ್ವದ ಬ್ರಿಟಿಷರ ವಿರುದ್ಧದ ರೈತದಂಗೆ ಬಗೆಗಿನ ವಿವರವಾದ ಮಾಹಿತಿ ನೀಡಿದರು. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪ್ರಮುಖರಾದ ಶ್ರೀ ಡಿ. ಎಸ್. ಮಾದಪ್ಪ, ಶ್ರೀಮತಿ ಕೆ. ಪಿ. ಚಂದ್ರಕಲಾ, ಮಾಜೀ ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಶ್ರೀ ಬೇಕಲ್ ಜಯರಾಂಗೌಡ ಶ್ರೀ ಅಚ್ಚಾಂಡಿರ ಬೋಪಣ್ಣ ಮಾತನಾಡಿ ದಿನದ ಮಹತ್ವ ಹಾಗೂ ಮುಂದೆ ಸರ್ಕಾರ ಕೈಗೊಳ್ಳಬೇಕಾದ ಹಲವು ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿದರು.

ಈ ಸಂದರ್ಭದಲ್ಲಿ ಆಗಮಿಸಿದ, ಶ್ರೀ ಶ್ರೀಕಾಂತ್ ವಾಲಗದ್, ಜಿಲ್ಲಾಧಿಕಾರಿಗಳಿಗೆ ಸಮಿತಿಯ ಮನವಿ ಪತ್ರವನ್ನು ಜಿಲ್ಲೆಯ ಮತ್ತೋರ್ವ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಂ. ಯು. ಅಚ್ಚಣ್ಣನವರ ಮೂಲಕ ಸಲ್ಲಿಸಲಾಯ್ತು. ಮನವಿ ಪತ್ರವನ್ನು ಸ್ವೀಕರಿಸಿದ ಜಿಲ್ಲಾಧಿಕಾರಿಗಳು ಮಾತನಾಡುತ್ತಾ ಹುತಾತ್ಮರ ಗೌರವಾರ್ಥ ನೆರವೇರಬೇಕಾದ ಬೇಡಿಕೆಗಳ ಈಡೇರಿಕೆಗೆ ಸರ್ಕಾರದ ವತಿಯಿಂದ ಪ್ರಯತ್ನಿಸುವುದಾಗಿ ಹಾಗೂ ಪೂರ್ಣ ಪ್ರಮಾಣದ ಸಹಕಾರ ನೀಡಲಾಗುವುದೆಂದು ತಿಳಿಸಿದರಲ್ಲದೆ, 1837ರ ಪರಿಸ್ಥಿತಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ದಂಗೆಯೆದ್ದು ಹೋರಾಟ ನಡೆಸಿದ ಅಪ್ಪಯ್ಯಗೌಡರ ಧೈರ್ಯ, ಸಾಹಸ, ಅಭಿನಂದನೀಯ ಎಂದರಲ್ಲದೆ, ಅಪ್ಪಯ್ಯ ಗೌಡರ ಸಮಾಜ ಹಾಗೂ ದೇಶದ ಅಭಿಮಾನದ ಬಗೆಗಿನ ಕಳಕಳಿ ಪ್ರಸ್ತುತ ಯುವಕರಿಗೆ ಆದರ್ಶ ಪ್ರಾಯವಾಗಿದೆ ಎಂದರು.

ಈ ಸಂಸ್ಮರಣದಲ್ಲಿ ಜಿಲ್ಲೆಯ ಗಣ್ಯ ವ್ಯಕ್ತಿಗಳಾದ ಶ್ರೀ ಬೂದಿಹಾಳ್, ಮುಖ್ಯ ಕಾರ್ಯದರ್ಶಿ, ಶ್ರೀ ಹೊಸಮನೆ ವಸಂತಕುಮಾರ್, ಅಧ್ಯಕ್ಷರು, ಡಿ. ವೈ. ಎಸ್‌ಪಿ. ಶ್ರೀ ಪೀಟರ್ ಲೋಬೊ, ಶ್ರೀ ಪೈಕೆರ ಅನಂತಕುಮಾರ್, ಅಧ್ಯಕ್ಷರು, ಕೊಡಗು ಗೌಡ ಸಮಾಜ ಮಡಿಕೇರಿ, ಶ್ರೀ ಹೊಸೂರು ರಮೇಶ್ ಜೋಯಪ್ಪ ಗೌಡ ವಿದ್ಯಾಸಂಘ ಮಡಿಕೇರಿ, ಶ್ರೀಮತಿ ರಾಧಾಯಾದವ್, ಅಧ್ಯಕ್ಷರು, ಗೌಡ ಮಹಿಳಾ ಒಕ್ಕೂಟ ಮಡಿಕೇರಿ, ಶ್ರೀ ಸೂದನ ನಾಣಯ್ಯ, ಅಧ್ಯಕ್ಷರು, ಗೌಡ ನಿವೃತ್ತ ಉದ್ಯೋಗಸ್ತರ ಸಂಘ, ಮಡಿಕೇರಿ ಶ್ರೀ ಕೋರನ ಗಂಗಮ್ಮ ಪೂಣಚ್ಚ, ಜಿಲ್ಲಾ ಪಂಚಾಯತ್ ಸದಸ್ಯರು, ಶ್ರೀ ಕೋರನ ಪೂಣಚ್ಚ ಅಧ್ಯಕ್ಷರು, ಗೌಡ ಸಮಾಜ ಕುಶಾಲನಗರ, ಶ್ರೀಮತಿ ಅಮೆಕಮಲಾ ಗಣಪತಿ, ಮಾಜಿ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು, ಶ್ರೀ ಅರಂಬೂರ್ ವಸಂತ ಕುಮಾರ್, ಶ್ರೀ ಕಟ್ರತನ ವೆಂಕಟೇಶ್ ಶ್ರೀ ಕೆ. ಜಿ. ಬೋಪಯ್ಯ ಜಿಲ್ಲಾ ಬಿಜೆಪಿ ಮಾಜಿ ಅಧ್ಯಕ್ಷರು, ಶ್ರೀ ಕೆದಂಬಾಡಿ ಪ್ರಕಾಶ್ ಶ್ರೀ ಕೊಡಿ ಚಂದ್ರಶೇಖರ್ ಶ್ರೀ ಕೋಳುಮುಡಿಯನ ಅನಂತಕುಮಾರ್, ಕಾರ್ಯದರ್ಶಿ ಗೌಡ ಸಮಾಜ, ಮಡಿಕೇರಿ, ಶ್ರೀ ಬಿ. ಎಂ. ರಾಮಯ್ಯ, ಸ್ಥಾಯಿ ಸಮಿತಿ ಅಧ್ಯಕ್ಷರು, ಪುರಸಭೆ ಹಾಗೂ ಅವರವರ ಸಂಘದ ಪದಾಧಿಕಾರಿಗಳು ಮೊದಲಾದವರು ಹಾಜರಿದ್ದರು.

ರಾಜ್ಯದ ಪ್ರಮುಖ ಪತ್ರಿಕೆಗಳಾದ, ಪ್ರಜಾವಾಣಿ, ವಿಜಯ ಕರ್ನಾಟಕ, ಸಂಯುಕ್ತ ಕರ್ನಾಟಕ, ಹೊಸದಿಗಂತ, ಉದಯವಾಣಿ, ಜನವಾಹಿನಿ, ಮೈಸೂರುಮಿತ್ರ, ಹಾಗೂ ಸ್ಥಳೀಯ ಎಲ್ಲಾ ಪತ್ರಿಕೆಗಳಲ್ಲಿ ಕಾರ್ಯಕ್ರಮದ ಬಗ್ಗೆ ವಿವರವಾದ ವರದಿ ಉನ್ನತ ಮಟ್ಟದಲ್ಲಿ ಪ್ರಸಾರಗೊಂಡಿದೆ.

ವಿ. ಸೂ. : ಕೊಡಗು ಜಿಲ್ಲಾಧಿಕಾರಿಗಳ ಮೂಲಕ ಸನ್ಮಾನ್ಯ ಮುಖ್ಯ ಮಂತ್ರಿಯವರಿಗೆ ಮನವಿ ಪತ್ರ ಸಲ್ಲಿಸಲಾಗಿದೆ.

-ಸಂಗಾತಿ

---

ಸುಭೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಶೌರ್ಯದ ಬಗ್ಗೆ ಪುಸ್ತಕ ರಚನೆಯಾಗಬೇಕು.

# ಭಾರತೀಯ ಭೂ ಸೇನೆಯಲ್ಲಿ ಕೊಡಗಿನ ವೈದ್ಯ ದಂಪತಿಗಳು : ಕ್ಯಾಪ್ಟನ್ ತೆಕ್ಕಡ ಪೂಣಚ್ಚ ದಿನೇಶ್ ಮತ್ತು ಲೆಫ್ಟಿನೆಂಟ್ ದರ್ಶನ್ ಕೌರ್.



ಭಾರತ ದೇಶವು ವಿಶ್ವದ ಅತಿ ದೊಡ್ಡ ಶಕ್ತಿ ರಾಷ್ಟ್ರಗಳಲ್ಲಿ ಒಂದಾಗಿದೆ. ವಿಶ್ವದ ಅತೀ ದೊಡ್ಡದಾದ ಮಿಲಿಟರಿ ಶಕ್ತಿಯಲ್ಲಿ ಭಾರತ ದೇಶವು ಒಂದು ಎಂದು ಹೇಳಲು ನಾವುಗಳು ಹೆಮ್ಮೆ ಪಡಬೇಕು. ಅಂತಹ ಮಿಲಿಟರಿ ಶಕ್ತಿಯ ನಿಜ ಜೀವನದಲ್ಲಿ ಕೊಡಗಿನ ಸತಿಪತಿ ದಂಪತಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವುದು ನಿಜಕ್ಕೂ ಸಂತಸಕರ ವಿಷಯವಾಗಿದೆ. ದೂರದ ಪಂಜಾಬಿನ ಪರಸ್ಥಳದ ಪರಜಾತಿಯ ಕನ್ಯೆಯನ್ನು ವಿಧಿವತ್ತಾಗಿ ಲಗ್ನ ಮಾಡಿಕೊಂಡು ಈಗಿನ ಪ್ರಗತಿಪರ ಪ್ರಪಂಚದ ಬದಲಾವಣೆಯಲ್ಲಿ ನಮ್ಮೆಲ್ಲರಿಗೂ ಅದರಲ್ಲೂ ಗೌಡ ಜನಾಂಗಕ್ಕೆ ಒಂದು ಮಾದರಿ ದಂಪತಿಗಳಾಗಿದ್ದಾರೆ ಶ್ರೀ ತೆಕ್ಕಡ ಪೂಣಚ್ಚ ದಿನೇಶ್ ಹಾಗೂ ಲೆಫ್ಟಿನೆಂಟ್ ದರ್ಶನ್ ಕೌರ್.

ಕ್ಯಾಪ್ಟನ್ ದಿನೇಶ್‌ರವರ ತಂದೆ ತೆಕ್ಕಡ ಪೂಣಚ್ಚ (ರಾಜು) BHEL ಭೂಪಾಲ್‌ನಲ್ಲಿದ್ದು ಈಗ ನಿವೃತ್ತರಾಗಿ ಮೈಸೂರಿನ ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲೋನಿಯಲ್ಲಿ ತಮ್ಮ ಧರ್ಮ ಪತ್ನಿ ಅವಂದೂರು ಗ್ರಾಮದ ಕಡ್ಯದ ಅಚ್ಚಯ್ಯನವರ ಮಗಳು ಧವರ್ಮಾವತಿಯೊಡನೆ ನಿವೃತ್ತ ಜೀವನ ಸಾಗಿಸುತ್ತಿರುವರು. ಇವರಿಗೆ ಇಬ್ಬರು ಗಂಡು ಮಕ್ಕಳು. ಹಿರಿಯವನು ದಿನೇಶ್ 20-4-1974 ರಲ್ಲಿ ಜನಿಸಿದರು. ಕಿರಿಯವ ಹರೀಶ್.

ಇವರ ಬಾಲ್ಯದ ವಿದ್ಯಾಭ್ಯಾಸ 5 ನೇ ತರಗತಿ ತನಕ ಮಡಿಕೇರಿಯ ಸೈಂಟ್ ಜೋಸೆಫ್ ಕಾನ್ವೆಂಟಿನಲ್ಲಿಯೂ, ಆ ನಂತರದ ವಿದ್ಯಾಭ್ಯಾಸ 12 ನೇ ತರಗತಿವರೆಗೆ ಜವಾಹರ್ ಲಾಲ್‌ನೆಹರು ಕೇಂದ್ರಿಯ ಶಾಲೆ, ಭೂಪಾಲ್‌ನಲ್ಲಿ ಮುಂದುವರಿಯಿತು. ತದನಂತರ CPMT ಪರೀಕ್ಷೆಯ ಮೂಲಕ ಮೆರಿಟ್‌ನಲ್ಲಿ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ (KIMS) ಹುಬ್ಬಳ್ಳಿಯಲ್ಲಿ ಪ್ರವೇಶ ಗಿಟ್ಟಿಸಿ M.B.B.S. ಗೆ ಆಯ್ಕೆಯಾಗಿ ಡಾಕ್ಟರಾದರು.

ಭಾರತೀಯ ರಕ್ಷಣಾ ಪಡೆಗೆ (ಆರ್ಮಿ ಮೆಡಿಕಲ್ ಕೋರ್ - AMC) ಆಯ್ಕೆ ಆದರು. ಹಾಗಾಗಿ ಇವರ ವೈದ್ಯಕೀಯ Internship 16-10-1999 ರಿಂದ 10-2-2000ರ ತನಕ Command Hospital Southern, PUNE ಯಲ್ಲಿ ಮಾಡಬೇಕಾಯಿತು. ಇವರು ಓದುಗಾರಿಕೆ ಜೊತೆಗೆ ಕಾಲೇಜ್ ಜೀವನದಲ್ಲಿ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಯಾಗಿಯೂ ಮತ್ತು ಉತ್ತಮ ಕಾಲ್ಚೆಂಡು ಆಟಗಾರರು ಆಗಿ ಒಳ್ಳೆ ಕೀರ್ತಿ ಪಡೆದಿದ್ದರು.

ಸೇನೆಗೆ ಸೇರಿ ತರಬೇತಿಯ ಸಮಯದಲ್ಲಿಯೂ ಸಹ ಉತ್ತಮ ಕ್ಯಾಡೆಟ್ (Best Candidate) ಬಹುಮಾನ ಪಡೆದುಕೊಂಡು, ಜೊತೆಗೆ ಸರ್ವೀಸ್‌ನ Foot Ball ಟೂರ್ನಿಯಲ್ಲಿ ಆಡಿದ ಕೀರ್ತಿ ಇವರದು. ಇವರು ಹಾಲಿ ರಿಜಿಮೆಂಟಲ್ ಮೆಡಿಕಲ್ ಆಫೀಸರ್, ಆಗಿ ರಾಜಸ್ಥಾನದ ಕೋಟದಲ್ಲಿರುವರು. ಇವರ ತಮ್ಮ ಹರೀಶ್ ವಿದೇಶದಲ್ಲಿ ಡಿಸೈನ್ ಇಂಜಿನಿಯರ್ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಲೆಫ್ಟಿನೆಂಟ್ ದರ್ಶನ್ ಕೌರ್‌ರವರ ತಂದೆ ದಿವಂಗತ ಕಿರಣ್‌ಪಾಲ್ ಸಿಂಗ್‌ನವರು ಪಂಜಾಬ್‌ನ ಗುರುದಾಸ್‌ಪುರದ ಸಿಖ್ಖ್ ಜನಾಂಗದವರು. ತಾಯಿ ವನಜಾರವರು (MNS) ನವದೆಹಲಿ ಕಾಂಟೋನ್‌ಮೆಂಟ್ ಆರ್ಮಿ ಆಸ್ಪತ್ರೆಯಲ್ಲಿ ನರ್ಸಿಂಗ್ ಸೇವಾ ವಿಭಾಗದಲ್ಲಿ ಮುಖ್ಯಸ್ಥೆಯಾಗಿರುವರು.

ಲೆಫ್ಟಿನೆಂಟ್ ದರ್ಶನ್ ಕೌರ್‌ರವರು ಪೂನಾದಲ್ಲಿ ಬಿ. ಎಸ್ಸಿ ನರ್ಸಿಂಗ್ ಆಫೀಸರ್ ಟ್ರೈನಿಂಗ್ ಮುಗಿಸಿ ಡೆಲ್ಲಿಯ ಆರ್ಮಿ ಆಸ್ಪತ್ರೆಯಲ್ಲಿ ಲೆಫ್ಟಿನೆಂಟ್ ಆಗಿ ನರ್ಸಿಂಗ್ ಸೇವೆಯಲ್ಲಿದ್ದಾರೆ.

ದಿನೇಶ್ ಮತ್ತು ದರ್ಶನ್ ಕೌರ್ ಇವರು ಒಬ್ಬರನ್ನೊಬ್ಬರು ಪ್ರೀತಿಸಿ ದಿನಾಂಕ 25-5-2003ರಂದು ಆದರ್ಶ ವೈದ್ಯ ದಂಪತಿಗಳಾದರು. ಇವರ ಮದುವೆಯು ಮೈಸೂರಿನ ಕೇನ್ಸ್ ಹೋಟೆಲ್‌ನಲ್ಲಿ ಬಾರಿ ವಿಜೃಂಭಣೆಯಿಂದ ನಡೆಯಿತು.

ದಂಪತಿಗಳಿರ್ವರು ಭಾರತೀಯ ಭೂ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿರುವುದಲ್ಲದೆ ಇವರಿಗೆ ಧೈರ್ಯ, ನಿಷ್ಠೆ, ಸ್ಥೈರ್ಯದಿಂದ ತಮ್ಮ ಕರ್ತವ್ಯ ನಿರ್ವಹಿಸುವಲ್ಲಿ ಸದಾ ನಮ್ಮೆಲ್ಲರ ಆಶೀರ್ವಾದವಿರಲೆಂಬುದಾಗಿ ಮತ್ತು ಇವರು ಇನ್ನೂ ಉನ್ನತ ಪದವಿಗೇರಿ ಜನಾಂಗಕ್ಕೂ ನಾಡಿಗೂ ಕೀರ್ತಿ ಯಶಸ್ಸು ತರಲೆಂದು ಕುಲಗುರು ವೆಂಕಟರಮಣ ಹಾಗೂ ಶೃಂಗೇರಿ ಶಾರದಾಂಬೆಯರ ಕೃಪಾ ಕಟಾಕ್ಷ ಸದಾ ಇರಲೆಂಬುದಾಗಿ ಸಂಗಾತಿ ಶುಭ ಹಾರೈಸುತ್ತದೆ.

-ಪಟ್ಟಡ ಪ್ರಭಾಕರ

ನೀನು ಜೀವನದಲ್ಲಿ ಹೆಚ್ಚು ಸಲ ನೋಡಿರುವ ಮುಖವೆಂದರೆ ನಿನ್ನದೇ ಆಗಿರುತ್ತದೆ.

# ಯುವ ಜನಾಂಗ ಮತ್ತು ಸಂಸ್ಕೃತಿ

ಅಪ್ಪನೆಟ್ಟ ಆಲದ ಗಿಡ, ಮಗನ ಕಾಲಕ್ಕೆ ಬರಿಯ ಬುಡ, ವೊಮ್ಮಗನಿಗಿರಲಿಲ್ಲ ಅದರ ಕಲ್ಪನೆ ಕೂಡ, ಹೀಗೆ ಬೆಳೆಯುತ್ತಿದ್ದೇವೆ ನಾವು. ಇದು ಕನ್ನಡ ನಾಡು ಕಂಡ ಅತ್ಯಂತ ಅಪರೂಪದ ಕವಿವರ್ಯರಲ್ಲೋರ್ವರಾದ ಶ್ರೀ ಕೆ. ಎಸ್. ನರಸಿಂಹ ಸ್ವಾಮಿಯವರ ಮಾತು. ಚಿಂತನೆಗೆ ಹಚ್ಚುವ ಬೆಟ್ಟ, ಗಾತ್ರದ ಜವಾಬ್ದಾರಿಗಳು ನಮ್ಮ ಮೇಲಿರುವುದನ್ನು ನೆನಪಿಸುವ ಮಾತು ಇದು, ಇನ್ನೊಂದು ಮಗ್ಗುಲಲ್ಲಿ ನೋಡುವುದಾದರೆ, ಚಲನಶೀಲ ಸಮಾಜದಲ್ಲಿ ಸಕಾಲಿಕ ಬದಲಾವಣೆಗಳು, ಮಾರ್ಪಾಡುಗಳು ಅನಿವಾರ್ಯವೆಂಬ ಧ್ವನಿಯೂ ಈ ಮಾತಿನಲ್ಲಿದೆ ಎಂದರೆ ತಪ್ಪಾಗಲಾರದು.

ಸಂಸ್ಕೃತಿ ಎಂಬ ಪದ ಅಗಾಧ ಅರ್ಥ ಬಾಹುಳ್ಯವನ್ನು ಹೊಂದಿದ್ದು, ಅದರ ವಿಶ್ಲೇಷಣೆ ಸಾಕಷ್ಟು ತ್ರಾಸದಾಯಕ. ಒಟ್ಟಾರೆಯಾಗಿ ಅರ್ಥೈಸಿಕೊಳ್ಳುವುದಾದರೆ ನಮ್ಮ ದೈನಂದಿನ ಬದುಕಿನ ಸಾಮಾಜಿಕ, ಶೈಕ್ಷಣಿಕ, ನೈತಿಕ ಆರ್ಥಿಕ, ರಾಜಕೀಯ, ಧಾರ್ಮಿಕ, ತಾರ್ಕಿಕ ಮುಂತಾದ ಹತ್ತಾರು ಮಗ್ಗುಲುಗಳಲ್ಲಿ ನಾವು ಮೈಗೂಡಿಸಿಕೊಂಡ, ನಂಬುವ, ಆಚರಿಸುವ ಮೌಲ್ಯ, ಆಚರಣೆಗಳ ಸಂಗ್ರಹವೇ ಸಂಸ್ಕೃತಿಯೆಂದಾಗುತ್ತದೆ.

ಜನಸಂಖ್ಯಾ ವಿಶ್ಲೇಷಣೆಯಲ್ಲಿ 0-15 ಮತ್ತು 60 ರ ನಂತರದ ವಯಸ್ಸಿನವರು ಅನುತ್ಪಾದಕ ಗುಂಪಿಗೆ ಸೇರುವುದಾದರೆ 15-60 ರ ತನಕದ ವಯೋಮಾನದವರು ಮಾತ್ರ ಉತ್ಪಾದಕ ಗುಂಪಿಗೆ ಸೇರುತ್ತಾರೆ. ವಾಸ್ತವದಲ್ಲಿ ಅನುತ್ಪಾದಕ ಗುಂಪು ಉತ್ಪಾದಕ ಗುಂಪಿನಂತೆ ನಿರ್ಣಾಯಕವಲ್ಲ. ಉತ್ಪಾದಕತೆ ಮತ್ತು ಯಜಮಾನ್ಯ ಒಂದಕ್ಕೊಂದು ಪೂರಕ. ಹೀಗಾಗಿ ಬದುಕಿನ ಸನ್ನಿವೇಶಗಳಲ್ಲಿ ಉತ್ಪಾದಕ ಗುಂಪಿನ ಪಾತ್ರ ಗಮನಾರ್ಹವಾದುದು. ಒಂದರ್ಥದಲ್ಲಿ ಹೇಳುವುದಾದರೆ ಈ ಉತ್ಪಾದಕ ಗುಂಪಿನ ಮನೋಪ್ರಕಾರದಂತೆ ಸಮಾಜ ಸ್ಥಿತಿಗತಿಗಳು ಒಪ್ಪ ಓರಣಗಳು ಇರುತ್ತವೆ, ಬರುತ್ತವೆ. ಭಾರತದಂತಹ ದೇಶದಲ್ಲಿ ಉತ್ಪಾದಕ ಗುಂಪಿನ, ಅರ್ಥಾತ್ ಯುವ ಜನತೆಯ ಶೇಕಡಾವಾರು ಪರಿಮಾಣ ಸುಮಾರು 50 ರಷ್ಟು. ಆದ್ದರಿಂದ ಯುವ ಜನಾಂಗ ಮತ್ತು ಸಂಸ್ಕೃತಿ ಎಂಬ ವಿಷಯ ಕುತೂಹಲಕಾರಿಯಾಗಿ ನಿಲ್ಲುತ್ತದೆ.

ಮತ್ತೆ ಆರಂಭದಲ್ಲಿ ನಾನು ಉಲ್ಲೇಖಿಸಿದ ಕೆ. ಎಸ್.ನ ರವರ ಮಾತನ್ನು ಸ್ಮರಿಸಿಕೊಳ್ಳುವುದಾದರೆ ಯುವ ಜನತೆಯ ತಲೆಮಾರು ಬದಲಾದಂತೆಲ್ಲಾ,ಸಂಸ್ಕೃತಿ ರೂಪಾಂತರವೋ, ಮಾರ್ಪಾಡೋ, ಸ್ಥಳಾಂತರವೋ ಆಗುವುದು ಅತ್ಯಂತ ಸಹಜ. ಈ ಸ್ಥಿತ್ಯಂತರಕ್ಕೆ ಸಿನಿಮಾ, ದೂರದರ್ಶನ, ಮೌಲ್ಯಗಳ ಕುರಿತು ತಾತ್ಸಾರ ಇತ್ಯಾದಿಗಳು ಪ್ರಮುಖ ಕಾರಣಗಳಾಗುತ್ತವೆ. ಈ ಹಿನ್ನಲೆಯಲ್ಲಿ ಗಮನಿಸುವುದಾದರೆ ಕೆಲವೊಂದು ದೃಷ್ಟಾಂತಗಳು ಉಲ್ಲೇಖಾರ್ಹ. ಮದುವೆಯ ಸಭಾಂಗಣಕ್ಕೆ ಪ್ರವೇಶಿಸುವಾಗ ಅತಿಥಿಗಳಿಗೆ ಸುಗಂಧ ದ್ರವ್ಯ ಸಿಂಪಡಿಸುವುದಕ್ಕೆ ಕೈ ಮುಗಿದು ಸ್ವಾಗತಿಸುವುದಕ್ಕೆ ಯಂತ್ರ ಮಾನವರಿರುತ್ತಾರೆ. ಅವುಗಳಿಗೆ ಕೆಲಸವನ್ನು ವಹಿಸಿದ ಅತಿಥೇಯರು ಅತಿಥಿಗಳನ್ನು ಸ್ವಾಗತಿಸುವ, ಉಪಚರಿಸುವ ಕರ್ತವ್ಯವನ್ನು ಕಳಚಿಕೊಂಡು ಬಿಡುತ್ತಾರೆ. ಇದು ಸಂಸ್ಕೃತಿ ಶಿಥಿಲಗೊಳ್ಳುವ ಒಂದು ಸನ್ನಿವೇಶ. ಭೂತಾರಾಧನೆ ಈ ಭಾಗದ ಸಂಸ್ಕೃತಿಯಲ್ಲಿ ಪ್ರಧಾನ ಪಾತ್ರ ಉಳ್ಳದ್ದಾಗಿದ್ದು, ಬಹುಮಾನ್ಯವಾಗಿದೆ. ಈ ಆಚರಣೆಯ ಸಂದರ್ಭ ಸಾಂಪ್ರಾದಾಯಿಕವಾದ, ನಿಶ್ಚಿತ ರಾಗಗಳನ್ನೇ ನುಡಿಸಬೇಕಾದ ವಾದ್ಯ ವೃಂದದವರು ಜನಪ್ರಿಯ ಸಿನಿಮಾ ಹಾಡುಗಳ ಧಾಟಿಯನ್ನು ನುಡಿಸುತ್ತಾರೆ. ಭೂತವೂ ಕುಣಿಯುತ್ತದೆ, ಮೈ ಮರೆಯುತ್ತದೆ. ಭೂತದ ಆರಾಧನೆಯಲ್ಲಿ ಭಾಗವಹಿಸಿದವರಿಗೆ ಖುಷಿಯಾಗುತ್ತದೆ. ಭೂತಕ್ಕೂ ಸಂತೃಪ್ತಿಯಾಗುತ್ತದೆ! ಇಂತಹ ಸಾಂಸ್ಕೃತಿಕ ಹಿನ್ನಲೆಗಳ ಔಚಿತ್ಯ, ವಾಸ್ತವಗಳ ಕುರಿತು ಮನನ ಮಾಡಿಕೊಳ್ಳಬೇಕಾದ ಜರೂರು ನಮ್ಮ ಮುಂದಿದೆ. ಈ ಜವಾಬ್ದಾರಿಯನ್ನು ಸುಲಲಿತವಾಗಿ ನಿರ್ವಹಿಸಲು ಯುವ ಜನಾಂಗವೇ ಹೆಚ್ಚು ಪ್ರಶಸ್ತ.

ದೇಶವೊಂದರ ಅಸ್ತಿತ್ವ, ಅಭಿವೃದ್ಧಿಗೆ ಆರ್ಥಿಕ ಮತ್ತು ರಾಜಕೀಯ ಸಬಲೀಕರಣ ಅದೆಷ್ಟು ಮುಖ್ಯವೋ ನಮ್ಮ ವೈಜ್ಞಾನಿಕ, ಸಾಂಪ್ರದಾಯಿಕ ಮೌಲ್ಯಗಳ ಸಬಲೀಕರಣವೂ ಅಷ್ಟೇ ಮುಖ್ಯ. ಈ ದಿಸೆಯಲ್ಲಿ ಯುವ ಜನಾಂಗಕ್ಕೆ ಹೆಚ್ಚು ಹೊಣೆಗಾರಿಕೆಯಿದೆ. ಇತ್ತೀಚೆಗೆ ಸುಳ್ಯ ತಾಲ್ಲೂಕು ಗೌಡರ ಯುವ ಸೇವಾ ಸಂಘವು 'ಗೌಡ ಯುವ ಸಮಾವೇಶ 2003' ಶಿರೋನಾಮೆಯಡಿಯಲ್ಲಿ ತನ್ನ ಕೈಲಾದ ಪ್ರಯತ್ನ ಮಾಡುತ್ತಿರುವುದು ಅಭಿನಂದನಾರ್ಹ. ವಿಚಾರಗೋಷ್ಠಿ, ಸ್ಮರಣ ಸಂಚಿಕೆ, ಪ್ರಬುದ್ಧ ಭಾಷಣಗಳು ಇತ್ಯಾದಿಗಳು. ಈ ಸಂಬಂಧದ ಪೂರಕ ಪ್ರಯತ್ನಗಳು. ಇದಕ್ಕೆ ಹಿರಿಯರಾದ ಪೂಜ್ಯ ಕುರುಂಜಿ ವೆಂಕಟ್ರಮಣ ಗೌಡರ ಪೂರ್ಣ ಸಹಕಾರವೂ ಇರುವುದು ಇನ್ನಷ್ಟು ಬಲ ನೀಡಿದೆ. ಒಟ್ಟಿನಲ್ಲಿ ಗಟ್ಟಿ ಸಂಸ್ಕೃತಿ ನೆಲೆಗೊಳ್ಳಲಿ ಎಂಬುದೇ ನಮ್ಮ ಆಶಯ.

ಪ್ರೊ || ಸೀತಾರಾಮ ಕೇವಳ,

---

*ಗಾದೆ-ತಗಾದೆ*

## ಬಗ್ಗಿದವನಿಗೆ ಗುದ್ದು ಜಾಸ್ತಿ

ಕೆಲವರಿಗೆ ಎಷ್ಟೇ ಕಷ್ಟಗಳನ್ನು , ತೊಂದರೆಗಳನ್ನು ಕೊಡಲಿ, ಅವರು ಅದನ್ನೆಲ್ಲಾ ಸೈರಿಸಿಕೊಂಡು ತಗ್ಗಿ ಬಗ್ಗಿ ನಡೆಯುತ್ತಾರೆ. ಅಂತಹವರಿಗೆ ಯಾರಾದರೂ ಕೊಡಬಾರದ ಕಷ್ಟಗಳನ್ನು ಕೊಡಬಹುದು. ಆದ್ದರಿಂದ ಅಂತಹ ವ್ಯಕ್ತಿಗಳನ್ನು ಈ ಗಾದೆ ಎಚ್ಚರಿಸುತ್ತದೆ.

ವಿನೋದ ತರಗತಿಯಲ್ಲಿ ಸರಳ, ಸಾಧು ಸ್ವಭಾವದವ. ಅವನಿಗೆ ತೊಂದರೆ ಕೊಡುವುದು, ಕೀಟಲೆ ಮಾಡುವುದನ್ನು ಆತನ ತರಗತಿಯಲ್ಲಿನ ಕೆಲವು ಹುಡುಗರು ಮಾಡುತ್ತಿದ್ದರು. ಅವನನ್ನು ಶಾಲೆ ಸುತ್ತ ಓಡಿಸುವುದು, ಬೈಯ್ಯುವುದು, ಹೊಡೆಯುವುದನ್ನು ಮಾಡುತ್ತಿದ್ದರು. ವಿನೋದ ಇತರರು ಕೊಟ್ಟ ಕಷ್ಟಗಳನ್ನೆಲ್ಲಾ ಸಹಿಸಿಕೊಳ್ಳುತ್ತಿದ್ದ.

ಒಮ್ಮೆ ವಿನೋದ ತನಗೆ ಕಷ್ಟ ಕೊಡುತ್ತಿದ್ದವರ ವಿರುದ್ಧ ಧೈರ್ಯವಾಗಿ ಎದುರಿಸಿ ನಿಂತ. ಅವನ ಧೈರ್ಯ ಕಂಡು ಅಂದಿನಿಂದ ಯಾರೂ ಅವನ ತಂಟೆಗೆ ಬರಲಿಲ್ಲ. ಈ ಘಟನೆಯಿಂದಾಗಿ ಆತ 'ಬಗ್ಗಿದವನಿಗೆ ಗುದ್ದು ಜಾಸ್ತಿ, ಆದ್ದರಿಂದ ಏನೇ ಬರಲಿ ಅದನ್ನು ಎದುರಿಸಿ ನಿಲ್ಲಬೇಕು' ಎಂಬುದನ್ನು ಕಂಡುಕೊಂಡ.

- ಕೆ. ಆರ್. ಮಿಲನ್, ಗಾಳಿಬೀಡು.

---

ನಮ್ಮ ಭಾವನೆಗಳನ್ನು ಬಿಂಬಿಸಿಕೊಳ್ಳಲು ಇರುವ ಅಗೋಚರ ಪರದೆಯೇ ಮನಸ್ಸು.

# ಕೊಡಗು ಗೌಡ ಸಮಾಜ ಬೆಂಗಳೂರಿನಲ್ಲಿ ಅದ್ದೂರಿಯಾಗಿ ನಡೆದ ಕಾವೇರಿ ತೀರ್ಥ ಪ್ರಸಾದ ಹಂಚಿಕೆ ಸಮಾರಂಭ

ಅಕ್ಟೋಬರ್ 26 ನೇ ಭಾನುವಾರ ದಿನ ಮಧ್ಯಾಹ್ನ 2 ಘಂಟೆಗೆ ಕೊಡಗು ಗೌಡ ಸಮಾಜದ ಸಭಾಂಗಣದ ವೇದಿಕೆಯಲ್ಲಿ ಲಕ್ಷ್ಮೀ, ಸರಸ್ವತಿ, ಪಾರ್ವತಿ ಹಾಗೂ ಮಹಾಮಾತೆ ಕಾವೇರಿಯ ಪೂಜೆ ಸಾಂಗವಾಗಿ ನೆರವೇರಿತು. ಬೆಂಗಳೂರಿನಲ್ಲಿ ಮಹಿಳಾ ಸಮಾಜದ ಮಹಿಳೆಯರಿಂದ ಸತತವಾಗಿ ಮೂರನೆಯ ವರ್ಷ ನಡೆಯುತ್ತಿರುವ ಈ ಪೂಜೆಗೆ ಸಾಕಷ್ಟು ಮಹನೀಯರು ಆಗಮಿಸಿ, ಮಹಿಳೆಯರು ಹಮ್ಮಿಕೊಂಡಿದ್ದ ಭಜನಾ ಕಾರ್ಯ ಕ್ರಮದಲ್ಲಿ ಸಕ್ರೀಯವಾಗಿ ಭಾಗವಹಿಸಿದರು.

ಬಿಟ್ಟೀರ ಶಂಭುರವರು ಹಾಗೂ ಕುದುಕುಳಿ ಜನಾರ್ಧನರವರು ಶ್ರೀಮಾತೆ ಕಾವೇರಿಯ ತೀರ್ಥವನ್ನು ಒದಗಿಸಿಕೊಟ್ಟರು. ಕಾವೇರಿ ಮನೆ ಡಾ|| ಭೋಜಪ್ಪ ಹಾಗೂ ಅವರ ಶ್ರೀಮತಿ ಬೋಜಮ್ಮನವರು ಹಾಗೂ ಮಹಿಳಾ ಸಮಾಜದ ಅಧ್ಯಕ್ಷೆ ಕುಯ್ಯಮುಡಿ ಸುಶೀಲರವರ ನೇತೃತ್ವದಲ್ಲಿ ಈ ಸಮಾರಂಭ ಬಹಳ ಅದ್ದೂರಿಯಾಗಿ ಸೊಗಸಾಗಿ ಮೂಡಿ ಬಂದಿತು. ಮಹಿಳಾ ಕಾರ್ಯಕರ್ತೆಯರು ಇವರಿಗೆ ಸಹಾಯಕರಾಗಿದ್ದು ಶ್ರೀಮತಿ ಸುಶೀಲರವರು ಸ್ವಾಗತಿಸಿದರು. ಪೂಜೆ ಭಜನಾನಂತರ ತೀರ್ಥ ಪ್ರಸಾದ ವಿನಿಯೋಗವಾಯಿತು. ಕೊನೆಯಲ್ಲಿ ಬಾರಿಕೆ ರಾಘವನವರು ಕಾರ್ಯಕ್ರಮದಲ್ಲಿ ಸಕ್ರೀಯವಾಗಿ ಭಾಗಿಯಾಗಿದ್ದವರನ್ನು ಶ್ಲಾಘಿಸಿ ವಂದನಾ ರ್ಪಣೆಯನ್ನು ಮಾಡಿದರಲ್ಲದೆ, ಇಂತಹ ಸಮಾರಂಭವನ್ನು ಕಡೆಗಣಿಸದೆ ಪಾಲುಗೊಳ್ಳಬೇಕೆಂದು ವಿನಂತಿಸಿದರು. ಇನ್ನೂ ಮುಂದಾದರೂ ಜನರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸೇರಲಿ ಎಂಬ ಹಂಬಲ ವ್ಯಕ್ತಪಡಿಸಿದರು.

ಕೊನೆಯದಾಗಿ ಹುತ್ತರಿ ಹಬ್ಬಕ್ಕೆ ಎಲ್ಲರನ್ನು ಆಮಂತ್ರಿಸಿದರು. ಕಾವೇರಿ ಪೂಜೆ ಹುತ್ತರಿಗೆ ಆಮಂತ್ರಣ ಪತ್ರಿಕೆ ಕಳುಹಿಸದೆ ಪ್ರತಿವರ್ಷ ನಡೆಯುವ ಕಾರ್ಯಕ್ರಮಕ್ಕೆ ಎಲ್ಲರೂ ಬಂದು ಭಾಗವಹಿಸಬಹುದೆಂದು ಸೂಚಿಸಿದರು.

ನಿಮ್ಮದೇ ಸಮಾಜ ನಿಮ್ಮದೇ ಹಬ್ಬ ಬಂದು ಭಾಗವಹಿಸಿ ಆಚರಿಸಲು ಯಾಕೆ ಸಂಕೋಚ? ಹತ್ತಾರು ಕುಟುಂಬದವರೊಡನೆ ಸೇರಿ ಆಚರಿಸುವ ಈ ಹಬ್ಬವನ್ನು ತೆರೆದ ಮನಸ್ಸಿನಿಂದ ಬಂದು ಕಣ್ತುಂಬಿಸಿ ನೋಡಿ ಎಂದು ಹಾರೈಸುವೆ.

- ಬಿಟ್ಟೀರ ಚೊಂದಮ್ಮ ಶಂಭು

# ಪ್ರತಿ ಮನೆಯಂಗಳದಲ್ಲಿ ಇರಬೇಕಾದ ಮರ - ನುಗ್ಗೆ ಮರ

*ನುಗ್ಗೆ: ಕಣ್ಣಿಗೆ ನುಣ್ಣಗೆ*

ನುಗ್ಗೇಸೊಪ್ಪು ಪೋಷಕಾಂಶಗಳ ಆಗರ, ಸ್ಪಷ್ಟ ದೃಷ್ಟಿಗೆ ಅವಶ್ಯವಾದ 'ಎ' ಜೀವ ಸತ್ವದ ಟಾನಿಕ್, ಮಕ್ಕಳು ಐದು ವರ್ಷದ ಒಳಗೇ ಪೂರ್ತಿ ಅಂಧತ್ವಕ್ಕೊಳಗಾಗಲು ಕಾರಣ 'ಎ' ಜೀವಸತ್ವದ ಕೊರತೆ. ಈ ಜೀವಸತ್ವ ನುಗ್ಗೆ ಸೊಪ್ಪಿನಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿದೆ.

'ಎ' ಜೀವ ಸತ್ವವು ಹಾಲು, ಬೆಣ್ಣೆ, ಮೊಟ್ಟೆ, ಮೀನು, ಇತ್ಯಾದಿ ಪ್ರಾಣಿ ಜನ್ಯ ಆಹಾರದಲ್ಲಿ ಇದೆ. ಹಸಿರು ಮತ್ತು ಹಳದಿ ಬಣ್ಣದ ತರಕಾರಿ ಮತ್ತು ಹಣ್ಣುಗಳಲ್ಲಿ ಪೂರ್ವಗಾಮಿಯಾದ ಬೀಟಾ ಕ್ಯಾರೋಟಿನ್ ರೂಪದಲ್ಲಿ ಈ ಸತ್ವವು ದೊರಕುತ್ತದೆ. ನುಗ್ಗೇ ಸೊಪ್ಪಿನಲ್ಲಿ ಪ್ರತಿಶತ ಸುಮಾರು 20 ಸಾವಿರ ಮೈಕ್ರೋಗ್ರಾಂ (ಎಂ.ಜಿ.) ಬೀಟಾ ಕ್ಯಾರೋಟಿನ್ ಇದೆ. ಆದರೆ ದೇಹಕ್ಕೆ ಬೇಕಾಗಿರುವುದು ಬರೀ 2400 ಮೈಕ್ರೋ ಗ್ರಾಮ್. ಅಂದರೆ ಒಬ್ಬ ಮನುಷ್ಯ ಸುಮಾರು 12 ರಿಂದ 15 ಗ್ರಾಮಿನಷ್ಟು ನುಗ್ಗೇಸೊಪ್ಪು ಸೇವಿಸಿದರೆ ಸಾಕು. ಅವನ ಒಂದು ದಿನದ 'ಎ' ಜೀವ ಸತ್ವದ ಅವಶ್ಯಕತೆ ಪೂರೈಸುತ್ತದೆ. ಜತೆಗೆ ನುಗ್ಗೇಸೊಪ್ಪು ಅಧಿಕ ಪ್ರಮಾಣದಲ್ಲಿ ಪ್ರೋಟೀನ್, ಶರ್ಕರ ಪಿಷ್ಟ, ಖನಿಜಗಳು, ನಾರು, ಮೇದಸ್ಸು, ಮತ್ತಿತರ ಜೀವಸತ್ವಗಳನ್ನು ಪೂರೈಸುತ್ತದೆ.

ನುಗ್ಗೇಸೊಪ್ಪಿನಲ್ಲಿರುವ 'ಎ' ಜೀವ ಸತ್ವ ರಕ್ತದಲ್ಲಿರುವ 'ಎ' ಜೀವ ಸತ್ವದ ಮಟ್ಟವನ್ನು (ರೆಟಿನಾಲ್ ಮಟ್ಟ) ಹೆಚ್ಚಿಸುತ್ತೋ ಇಲ್ಲವೋ, ಎಂದು ತಿಳಿಯಲು ಧಾರವಾಡ ಕೃಷಿ ವಿಶ್ವವಿದ್ಯಾಲಯದ ಆಹಾರ ವಿಜ್ಞಾನ ಮತ್ತು ಪೋಷಣೆ ವಿಭಾಗವು ಸಂಶೋಧನೆ ನಡೆಸಿದಾಗ ಅನೇಕ ಅಂಶಗಳು ಬೆಳಕಿಗೆ ಬಂದಿವೆ. ಮಕ್ಕಳಲ್ಲಿ ಈ ಕೊರತೆ ಹೆಚ್ಚಾಗಿ ಕಂಡು ಬಂದಿದ್ದು, ಆಯ್ದ ಶಾಲೆಗಳಿಂದ ಶಾಲಾ ಮಕ್ಕಳನ್ನು ಆಯ್ಕೆ ಮಾಡಿ ಅವರ ಎತ್ತರ, ತೂಕ, ರಕ್ತದಲ್ಲಿನ 'ಎ' ಜೀವ ಸತ್ವದ ಮಟ್ಟ ಮತ್ತು ಹಿಮೋಗ್ಲೋಬಿನ್ ಮಟ್ಟ ಪರೀಕ್ಷೆ ಮಾಡಿ ಅವರಿಗೆ ದಿನ ನಿತ್ಯ ನಿಗದಿತ ಪ್ರಮಾಣದಲ್ಲಿ ನುಗ್ಗೇಸೊಪ್ಪಿನಿಂದ ತಯಾರಿಸಿದ ಚಪಾತಿ ಮತ್ತು ಗಜ್ಜರಿ ಪಲ್ಲೆಗಳನ್ನು ಸತತವಾಗಿ ಮೂರು ತಿಂಗಳು ಕೊಟ್ಟು, ನಂತರ ರಕ್ತದಲ್ಲಿನ 'ಎ' ಜೀವ ಸತ್ವ ಮತ್ತು ಹಿಮೋಗ್ಲೋಬಿನ್ ಮಟ್ಟ ಗಣನೀಯವಾಗಿ ಹೆಚ್ಚಾಗಿದ್ದು ಗಮನಕ್ಕೆ ಬಂದಿದೆ. ಅಲ್ಲದೆ ಜ್ವರ, ನೆಗಡಿ, ಕೆಮ್ಮು ಮತ್ತು ಸೋಂಕು ರೋಗಗಳಿಂದ ಬಳಲುವ ಮಕ್ಕಳ ಸಂಖ್ಯೆ ಕಡಿಮೆ ಆಗಿದೆ. ರಕ್ತಹೀನತೆಯಿಂದ ಅಧಿಕವಾಗಿ ಬಳಲುವ ಗರ್ಭಿಣಿ ಸ್ತ್ರೀಯರಿಗೆ ಹಾಲೂಡಿಸುವ ತಾಯಂದಿರಿಗೆ ಕೂಡಾ ಇದೊಂದು ವರದಾನ.

-ಸಂಗಾತಿ



# ಹಾರ್ರುವ ವಿಮಾನದ ನೆರಳ್ ಯಾಕೆ ನಮಿಗೆ ಕಾಂಬುದುಲೆ?



ಬೆಳ್‌ಕ್‌ನ ಮೂಲ ಬಿಂದ್ ರೂಪಲಿ ಉಟ್ಟೋ ಉರುಟಾಗಿಟ್ಟೊತ್ತೇಳ್ದು ವಸ್ತುಗಳ ನೆರ್‌ಳ್‌ನ ಗುಣನ ನಿರ್ಧರಿಸಿದೆ. ಬಿಂದ್ ರೂಪನ ಬೆಳಕ್‌ನ ಮುಲಂದಾಗಿ ಉಂಟಾಗುವ ನೆರ್‌ಳ್ ಪೂರ್ಣ ಛಾಯೆಯಾಗಿದ್ದ್ ಸ್ಪಷ್ಟವಾಗಿದ್ದದೆ. ಸೂರ್ಯ ಬಿಂದು ಮೂಲವಾಗಿದ್ದರೆ ನೆಲದ ಮ್ಯಾಲೆ, ಹಾರುವ ವಿಮಾನದ ನೆರಳ್ ಸಹ ಸ್ಪಷ್ಟವಾಗಿ ಬೀಳ್ತಿತ್ತ್. ಹಂಗಲ್ಲದ್ದರಿಂದ ಹಾರುವ ವಿಮಾನದಂತಹ ಸಂಣ ವಸ್ತುಗಳ ನೆರಳ್ ಮಧ್ಯಲಿ ಪೂರ್ಣ ಛಾಯೆಯಿದ್ದ್ ಸುತ್ತುಲು ಅರ್ಧಛಾಯೆ ಆವರಿಸಿದ್ದದೆ. ಸೂರ್ಯ ಗ್ರಹಣದ ಸಮಯ ಭೂಮಿಯ ಮ್ಯಾಲೆ ಬೀಳ್ವ ಚಂದ್ರನ ನೆರಳಿನಂಗೇನೇ ವಿಮಾನದ ನೆರಳ್ ಇದ್ದದೆ. ವಿಮಾನ ನೆಲಕ್ಕೆ ತೀರ ಹಕ್ಕಲೆ ಹಾರ್‌ಕನ ಅದರ ಪೂರ್ಣ ಛಾಯೆ ನೆಲಮುಟ್ಟದೆ. ಆಗ ಮಾತ್ರ ವಿಮಾನದ ನೆರ್‌ಳ್‌ನ ನೋಡಕ್ಕ್.

-ಪ್ರಿನ್ಸ್‌ಲಿ ವಸಂತಕುಮಾರ್, ಮೈಸೂರು.

# ಗೌಡರ ಸಂಸ್ಕೃತಿ ಬಿಂಬಿಸುವ ಐನ್ ಮನೆಗಳು

ಪ್ರತಿಯೊಂದು ಜನಾಂಗಕ್ಕೂ ಅವರದ್ದೇ ಆದ ಸಂಸ್ಕೃತಿಯಿದೆ. ಜನಾಂಗ ದೃಷ್ಟಿಯಿಂದ ಅದಕ್ಕೆ ಗೌಡ ಜನಾಂಗ ಹೊರತಲ್ಲ. ಗೌಡ ಸಮುದಾಯದ ಸಾಂಪ್ರದಾಯಿಕ ಶೈಲಿಯ ಐನ್ ಮನೆಗಳು ಬಹು ವಿಶಿಷ್ಟವಾಗಿ ಇಂದಿಗೂ ತಮ್ಮ ಮಹತ್ವವನ್ನು ಉಳಿಸಿಕೊಂಡು ಬಂದಿವೆ.

ಒಂದೇ ಅಡುಗೆ ಮನೆಯನ್ನು ಹೊಂದಿರುವ, ಕುಟುಂಬಸ್ಥರು ಕೂಡು ಕುಟುಂಬವಾಗಿ ವಾಸಮಾಡುವ ಮನೆಯನ್ನು ಐನ್‌ಮನೆಯೆನ್ನಬಹುದು. ವಿಭಕ್ತ ಕುಟುಂಬ ವ್ಯವಸ್ಥೆಯ ಕಲ್ಪನೆ ಬಂದ ಬಳಿಕ ಅವಿಭಕ್ತ ಕುಟುಂಬಗಳು ಕವಲುಗಳಾಗಿ ಒಡೆದವು. ಸದಸ್ಯರ ಸಂಖ್ಯೆ ಮತ್ತು ಆಸ್ತಿಯ ವಿಸ್ತರಣೆಯೊಂದಿಗೆ ಕೂಡು ಕುಟುಂಬಗಳು ಕವಲುಗಳಾಗಿ ದೂರದ ಊರುಗಳಲ್ಲಿ ನೆಲೆ ನಿಲ್ಲುವುದು ಅನಿವಾರ್ಯವಾಯಿತು. ಆದರೂ ವರ್ಷಾವರ್ತದ ಮತ್ತು ಜೀವನಾವರ್ತದ ಪ್ರತಿಯೊಂದು ಹಬ್ಬ, ಹರಿದಿನ ಆಚರಣೆ ವಿಧಿ ವಿಧಾನಗಳಿಗೆ, ದೈವ-ದೇವರ ನಡಾವಳಿಗಳಿಗೆ, ತಮ್ಮ ಮೂಲ ಸ್ಥಾನಕ್ಕೆ ಕುಟುಂಬದ ಎಲ್ಲಾ ಸದಸ್ಯರು ಬರುತ್ತಾರೆ. ಹೀಗೆ ಮೂಲದಲ್ಲಿ ಒಂದೇ ಕುಟುಂಬವಾಗಿದ್ದು ಬಳಿಕ ಕವಲಾಗಿ ದೂರ ದೂರುಗಳಲ್ಲಿ ವಾಸಿಸುತ್ತಿದ್ದರೂ, ತಮ್ಮ ಬದುಕಿನ ಸಾಂಸ್ಕೃತಿಕ ನೆಲೆಗಳನ್ನು ಕಂಡುಕೊಳ್ಳಲು ತಮ್ಮ ಮೂಲ ಸ್ಥಾನಕ್ಕೆ ಬರುತ್ತಾರೆ. ಇಂತಹ ಮೂಲ ಸ್ಥಾನವನ್ನು ಜನಪದೀಯವಾಗಿ ಐನ್‌ಮನೆಯೆಂದು ಅಥವಾ 'ತರವಾಡು' ಮನೆಯೆಂದು ಕರೆಯುತ್ತಾರೆ.

ಗೌಡರ ಪ್ರತಿಯೊಂದು ಐನ್‌ಮನೆಗಳಿಗೆ ಅವುಗಳದ್ದೇ ಆದ ಹಿನ್ನಲೆ,ಪರಂಪರೆಗಳಿರುತ್ತವೆ. ಅವರ ಭೌತಿಕ ಬದುಕಿನ ಮುಖ್ಯ ನೆಲೆಯಾಗಿರುವ ಮನೆಗಳ ರಚನಾ ವಿನ್ಯಾಸಗಳು, ಸಾಮಾನ್ಯ ಮನೆಗಳಿಗಿಂತ ಭಿನ್ನವಾಗಿರುತ್ತವೆ. ಇಂತಹ ಐನ್ ಮನೆತನಗಳ ಮನೆಗಳನ್ನು ನಾಲ್ಕು ಸೂತ್ರದ, ನಾಲ್ಕಂಕಣದ ಮನೆಗಳೆಂದು ಗುರುತಿಸುತ್ತಾರೆ. ಐನ್ ಮನೆತನಗಳಲ್ಲಿ ಈ ಮನೆಗಳನ್ನು ಹೊಂದಿರಬೇಕಾಗಿಲ್ಲ. ಕೆಲವು ಐನ್ ಮನೆತನಗಳು ಇಂತಹ ಮನೆಗಳನ್ನು ಹೊಂದಿರುತ್ತವೆ.

ಸುಮಾರು ಮೂರು ಅಡಿಗಳಷ್ಟು ಎತ್ತರದ ತಳಪಾಯ (ಪಂಚಾಂಗ)ದಲ್ಲಿ ಮನೆರಚನೆಯಾಗುತ್ತದೆ. ನಾಲ್ಕಂಕಣದ ಮನೆಗಳ ಮುಖ್ಯ ಬಾಗಿಲು ಪೂರ್ವ ದಿಕ್ಕಿಗೆ ಇರುವುದು ವಿಶೇಷವಾಗಿ ಕಂಡು ಬರುತ್ತದೆ. ಅಂಗಳದಿಂದ ಜಗಲಿಯನ್ನೇರಲು ಮೂರು ಮೆಟ್ಟಿಲುಗಳಿರುತ್ತವೆ. ಕೆಲವು ಮನೆಗಳಲ್ಲಿ ಮೆಟ್ಟಿಲು ಹತ್ತುವ ಮೊದಲು ಮೊಗಲಾಲೆ ಇರುತ್ತದೆ. ಸುಮಾರು ಮೂರು ಅಡಿ ಅಗಲದ ಜಗಲಿಯಿಂದ ನಾಲ್ಕಂಕಣದ ಐನ್ ಮನೆಗಳು ಆರಂಭವಾಗುತ್ತದೆ. ಈ ಜಗಲಿ ಸಂಸ್ಕೃತಿಯ ಅಂತರಂಗ ಮತ್ತು ಬಹಿರಂಗಗಳ ಮಧ್ಯದ, ಅವೆರಡರ ಸಂಬಂಧ ಕಲ್ಪಿಸಲು ಸಹಾಯಕವಾಗುವ ಸ್ಥಳ. ಜಗಲಿಗೂ ಚಾವಡಿಗೂ ಮಧ್ಯೆ ಸುಮಾರು ಅರ್ಧ ಅಡಿಯಿಂದ ಒಂದು ಅಡಿಯಷ್ಟು ಎತ್ತರದ ತಿಟ್ಟೆ ಇರುತ್ತದೆ. ಇದನ್ನು ಮರದ ಹಲಗೆಯಿಂದ ಹಾಸಿ ಅದರ ಮೇಲೆ ಕೆತ್ತನೆ ಕೆಲಸದ (ಕಾಷ್ಠ ಶಿಲ್ಪ) ಬೋದಿಗೆಯ ಕಂಬಗಳಿರುತ್ತವೆ. ಒಟ್ಟಾಗಿ ಈ ಸ್ಥಳ ಭಾಗವನ್ನು ಸುಳ್ಯ ಪರಿಸರದ ಅರೆಭಾಷಿಕ ಗೌಡರು 'ಐಮರ' ವೆಂದು, ತುಳು ಭಾಷಿಕ ಗೌಡರು 'ಬಾಜಿರ'ವೆಂದೂ ಕರೆಯುತ್ತಾರೆ. ಇದು ಮನೆಗೆ ಬಂದು ಹೋಗುವವರಿಗೆ ಕುಳಿತುಕೊಳ್ಳಲು ಆಸನವಾಗಿಯೂ ಉಪಯೋಗವಾಗುತ್ತದೆ. ಜಗಲಿಯ ಬಲಭಾಗದಲ್ಲಿ 'ನ್ಯಾಯಕಟ್ಟೆ' ಇರುತ್ತದೆ. ಇಲ್ಲಿ ಊರಿನ ನ್ಯಾಯ ತೀರ್ಮಾನಗಳನ್ನು ದೈವದ ಪ್ರತಿನಿಧಿಯಾಗಿ ಮನೆಯ 'ಕರ್ತ' (ಯಜಮಾನ) ಮಾಡುತ್ತಾನೆ. ಈ ಕಟ್ಟೆಯನ್ನು ಮನೆಯ ಯಜಮಾನ ಮಾತ್ರ ಉಪಯೋಗಿಸಬಹುದು. ಮನೆಯ ಎಡಭಾಗದ, ಪೂರ್ವಾಗ್ನೇಯ ಭಾಗದಲ್ಲಿ ಧರ್ಮದೈವದ 'ಮಾಡ'ವಿರುತ್ತದೆ. ಇದಕ್ಕೆ ಜಗಲಿಯಿಂದ ಬಾಗಿಲಿರುತ್ತದೆ.

ಜಗಲಿ ಮತ್ತು ಐಮರವನ್ನು ಹೊಂದಿಕೊಂಡು ಮನೆಯ ಮುಖ್ಯ ಘಟಕ ಚಾವಡಿ ಇದೆ. ಐನ್ ಮನೆಯ ಪ್ರಧಾನ ಕಾರ್ಯಸ್ಥಾನ ಚಾವಡಿಯಾಗಿರುತ್ತದೆ. ಸೂತಕದ ಜನರು ಈ ಚಾವಡಿಯನ್ನುಪ್ರವೇಶಿಸುವಂತಿಲ್ಲ.

ಈ ರೀತಿಯ ಸಾಂಪ್ರದಾಯಿಕ ಶೈಲಿಯ ಮನೆತನಗಳಲ್ಲಿ ಉಳುವಾರು ಮನೆತನ, ಕುಂಚಡ್ಕದ ನಾಲ್ಕು ಸೂತ್ರದ ಐನ್‌ಮನೆ, ಕುಡೆಕಲ್ಲು ಮನೆತನ, ದೇರಾಜೆ ಮನೆತನ, ಸಂಪಾಜೆಯ ನಾಲ್ಕು ಸೂತ್ರದ ಮನೆ, ದೋಳ್ಪಾಡಿ, ಬಳ್ಪದ, ಎಣ್ಮೆಮಜಲು,ಪುತ್ತೂರು ತಾಲೂಕಿನ ಪಡುಬಲ್ನಾಡು ಕಟ್ಟೆಮನೆ, ವಿಟ್ಲದ ಕಂಬಳಬೆಟ್ಟು, ಅಮೈ ಮನೆತನಗಳು ಗಮನಾರ್ಹವೆನಿಸಿವೆ.

ನಾಲ್ಕಂಕಣದ ಐನ್‌ಮನೆಗಳು ಗೌಡ ಜನಾಂಗಕ್ಕೆ ಮಾತ್ರ ಸೀಮಿತವಾಗಿವೆ. ಉಳಿದಂತೆ ಮಿಕ್ಕ ರೀತಿಯ ಮನೆತನಗಳು ಎಲ್ಲಾ ಜನಾಂಗಗಳಿಗೂ ಇರಬಹುದು. ಯಾವುದೇ ರೀತಿಯ ಮನೆಗಳ ನಿರ್ಮಾಣದಲ್ಲೂ, ಜಾತಿ, ವೃತ್ತಿ, ಧಾರ್ಮಿ ಕಾಂಶಗಳು, ಪ್ರಾಕೃತಿಕ ಸಂಗತಿಗಳು ದಟ್ಟವಾದ ಪ್ರಭಾವವನ್ನು ಬೀರುತ್ತವೆ.

ವರ್ತಮಾನದಲ್ಲಿ ಈ ನಾಲ್ಕಂಕಣದ ಐನ್‌ಮನೆಗಳು ವಿಭಕ್ತ ಕುಟುಂಬಗಳಾಗಿ ತಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಶೈಥಿಲ್ಯ ಕಂಡಿವೆ. ಹಿರಿಯ 'ಕುತ್ತಿ'ಗೆ ಐನ್ ಮನೆಯ ಉಸ್ತುವಾರಿ ತಲಾಂತರದಿಂದ ನಡೆದು ಬರುತ್ತಿತ್ತು. (ಕುತ್ತಿಯೆಂದರೆ ಒಬ್ಬ ತಂದೆಯ ವಿಭಾಗ) ಬಹುತೇಕ ನಾಲ್ಕಂಕಣದ ಮನೆಗಳಲ್ಲಿ ಕುಟುಂಬಸ್ಥರು ವಾಸವಾಗಿಲ್ಲ. ಆದರೂ ಈ ಮನೆಗಳನ್ನೂ ದೈವ ದೇವರ ನೆಲೆಯೆಂಬಂತೆ ರಕ್ಷಿಸಿಕೊಂಡು ಬರುತ್ತಿದ್ದಾರೆ. ಕುಂಚಡ್ಕ, ಉಳುವಾರು ಮನೆಗಳು ಬಿದ್ದು ಹಾಳಾಗಿದ್ದವು. ಆದರೆ ಈಗ ಆ ಮನೆತನಗಳ ಸದಸ್ಯರು, ಆ ಮನೆಗಳನ್ನು ಹೊಸದಾಗಿ ನಿರ್ಮಾಣ ಮಾಡಿ ಊರ್ಜಿತಗೊಳಿಸಿದ್ದಾರೆ. ಕುಟುಂಬ ಸದಸ್ಯರಿಂದಲೇ

8 ನೇ ಪುಟಕ್ಕೆ

# ಬಾಟ್ಲಿ ಹಾಲು ಬೇಡ !

ಮಗುವಿನ ದೇಹದೊಳಗಿನ ಪಚನ ಕ್ರಿಯೆಯನ್ನು ವೃದ್ಧಿಸಿ, ಪೌಷ್ಟಿಕ ಆಹಾರವಾಗಿ, ಮಗುವಿನ ಸುಪುಷ್ಟ ಬೆಳವಣಿಗೆ ಸಹಾಯಕವಾಗುವ ತಾಯಿಯ ಎದೆಹಾಲನ್ನು ನೀಡುವುದನ್ನು ಬಿಟ್ಟು ಬಾಟಲಿ ಹಾಲಿಗೆ ಶರಣಾದರೆ ಗಂಭೀರ ಖಾಯಿಲೆಗೆ, ಕೆಲವೊಮ್ಮೆ ಹಸುಳೆಯ ಸಾವಿಗೂ ಕಾರಣವಾಗಬಹುದು.

ಹಸು ಅಥವಾ ಎಮ್ಮೆಯ ಹಾಲು, ಹಾಲಿನ ಪುಡಿಯ ನೀರು ಮತ್ತು ಮಕ್ಕಳ ಬೇರೆ ರೀತಿಯ ಆಹಾರಗಳನ್ನು ಬಾಟಲ್ ಮೂಲಕ ಕುಡಿಸುವುದರಿಂದ, ಮಕ್ಕಳಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ಭೇದಿ, ಕೆಮ್ಮು, ನೆಗಡಿ ಮುಂತಾದ ಖಾಯಿಲೆಗಳಿಂದ ರಕ್ಷಣೆ ಸಿಗುವುದಿಲ್ಲ. ಬಾಟಲ್ ಹಾಲನ್ನು ಸೇವಿಸುವ ಮಕ್ಕಳು ಮೊದಲ 4 ರಿಂದ 6 ತಿಂಗಳುಗಳ ಕಾಲ ತಾಯಿಯ ಎದೆಹಾಲನ್ನು ಸೇವಿಸುವ ಮಕ್ಕಳಿಗಿಂತ ಶೇ. 25 ರಷ್ಟು ಅಧಿಕ ಪ್ರಮಾಣದಲ್ಲಿ ಭೇದಿಯಿಂದ ಸಾವನ್ನಪ್ಪುತ್ತಾರೆ. ಕಾರಣ ಬಾಟಲ್ ಹಾಲಿನ ಸೇವನೆಯಿಂದ ಅತಿಸಾರಕ್ಕೆ ಹೆಚ್ಚಿನ ಅವಕಾಶವಿರುತ್ತದೆ. ಏಕೆಂದರೆ ನೀರನ್ನು ಕುದಿಸದಿರುವುದು ಹಾಲು ಕುಡಿಸುವಾಗಲೊಮ್ಮೆ ಬಾಟಲ್ ಮತ್ತು ನಿಪ್ಪಲ್‌ಗಳನ್ನು ಬಿಸಿ ನೀರಿನಲ್ಲಿ ಹಾಕಿ ಕುದಿಸದಿರುವುದು. ಹೀಗಾಗಿ ಯಾವಾಗಲೂ ಮಗು ಖಾಯಿಲೆಗೆ ತುತ್ತಾಗುವುದರಿಂದ, ಪೌಷ್ಟಿಕತೆಯ ಕೊರತೆಯಿಂದ ನರಳುತ್ತದೆ. ಮಗುವಿಗೆ ಯಾವುದಾದರೂ ಕಾರಣದಿಂದ ಎದೆಹಾಲು ಕುಡಿಯಲು ಆಗುವುದೇ ಇಲ್ಲವೆಂದಾಗ ತಾಯಿಯ ಎದೆಯಿಂದ ಹಾಲನ್ನು ತೆಗೆದು ಕಪ್ ಅಥವಾ ಚಮಚದ ಮೂಲಕ ಕುಡಿಸಬೇಕು. ಏಕೆಂದರೆ ಬಾಟಲ್‌ಗಿಂತ ಕಪ್ ಅಥವಾ ಚಮಚವೇ ಸುರಕ್ಷಿತ. ಕಾರಣ ಬಾಟಲ್‌ನಿಂದ ಇವನ್ನೇ ಸುಲಭವಾಗಿ ಸ್ವಚ್ಛವಾಗಿಸಿಕೊಳ್ಳಬಹುದು. ಸಾಂಪ್ರದಾಯಿಕವಾಗಿ ಬಳಸುತ್ತಿದ್ದ 'ಒಳಲೆ' ಎಂದು ಕರೆಯಲ್ಪಡುತ್ತಿದ್ದ ಉದ್ದನೆಯ ಚಮಚದಲ್ಲಿ ಹಾಲನ್ನು ಕುಡಿಸಲು ತುಂಬಾ ಅನುಕೂಲವಾಗಿತ್ತಿತ್ತು. ಸ್ವಂತ ತಾಯಿಯ ಹಾಲು ಸಿಗದಿದ್ದಾಗ, ಮಗುವಿಗೆ ಬೇಕೆ ತಾಯಿಯ ಎದೆಹಾಲು ಲಭ್ಯವಾದರೆ ಅತ್ಯುತ್ತಮ ಆಹಾರವಾಗುತ್ತದೆ. ಪ್ರಾಣಿಗಳ ಹಾಲು ಕೊಡಲೇಬೇಕಾದರೆ, ಬಾಟಲ್‌ಗಿಂತ ಸ್ವಚ್ಛವಾದ ಚಮಚ ಅಥವಾ ಕಪ್‌ಗಳನ್ನು ಉಪಯೋಗಿಸುವುದೇ ಒಳ್ಳೆಯದು. ಹಾಲಿನ ಪುಡಿಯಿಂದ ಅಥವಾ ಬೇರಾವುದೇ ರೆಡಿಮೇಡ್ ಫುಡ್‌ನಿಂದ ಯಾವುದಾದರೂ ಆಹಾರವನ್ನು ತಯಾರಿಸುವುದಾದಲ್ಲಿ, ಕುದಿಸಿ ತಣ್ಣನೆ ಮಾಡಿದ ನೀರನ್ನೇ ಉಪಯೋಗಿಸಬೇಕು.

ಹಸುವಿನ ಅಥವಾ ಎಮ್ಮೆ ಹಾಲಿನಿಂದ, ಹಾಲಿನ ಪುಡಿಯಿಂದ ಉತ್ಪಾದಿಸಿದ ಆಹಾರ ಪದಾರ್ಥಗಳಿಗೆ ಅತಿ ಹೆಚ್ಚಿಗೆ ನೀರನ್ನು ಉಪಯೋಗಿಸುವುದರಿಂದ, ಮಕ್ಕಳ ಬೆಳವಣಿಗೆಗೆ ತೊಂದರೆಯುಂಟಾಗುತ್ತದೆ.

ಆ ಹಾಲನ್ನು ಕೋಣೆಯ ಉಷ್ಣಾಂಶದಲ್ಲಿಡುವುದರಿಂದ ಕೆಲವೇ ಗಂಟೆಗಳಲ್ಲಿ ಕೆಟ್ಟುಹೋಗುತ್ತದೆ. ಅದೇ ಎದೆ ಹಾಲನ್ನು ಹಾಳಾಗದಂತೆ ಕೋಣೆಯ ಉಷ್ಣಾಂಶದಲ್ಲಿ 8 ಗಂಟೆಗಳ ಕಾಲ ಇಡಬಹುದು. ಕಡಿಮೆ ಆದಾಯವಿರುವ ಜನರಲ್ಲಿ ಪ್ರಾಣಿಗಳ ಹಾಲು ಅಥವಾ ಹಾಲಿನಪುಡಿ, ಬಾಟಲ್, ನಿಪ್ಪಲ್, ನೀರು ಕುದಿಸಲು ಬೇಕಾಗುವ ಇಂಧನ ಇವೆಲ್ಲ ಸೇರಿ ಅಂದಾಜು ಕುಟುಂಬದ ಆದಾಯದ ಶೇ. 20-25 ನಷ್ಟು ಆಗಬಹುದು. ಅದೇ ಎದೆಹಾಲನ್ನು ಮಗುವಿಗೆ ಕೊಡುವುದಾದಲ್ಲಿ, ತಾಯಿಗೆ ಮಾತ್ರ ಒಳ್ಳೆಯ ಪೌಷ್ಟಿಕ ಆಹಾರ ಕೊಡಬೇಕು. ಇದರಿಂದ ಮಗುವಿಗೂ ಕ್ಷೇಮ ಮತ್ತು ತಾಯಿಯ ಆರೋಗ್ಯ ಪಾಲನೆ ಮಾಡಿದಂತೆಯೂ ಆಗುತ್ತದೆ.

ಶಕ್ತಿಯ ಮತ್ತು ಪ್ರೋಟೀನ್‌ಗಳ ಮುಖ್ಯ ಮೂಲವಾಗಿರುವ ಎದೆಹಾಲು ಮಗುವಿನ ಎರಡು ವರ್ಷದವರೆಗಿನ ಮತ್ತು ಜೀವನದ ಮುಂದಿನ ಸಮಯಗಳಲ್ಲಿ ಬರುವ ಖಾಯಿಲೆಗಳಿಂದ ರಕ್ಷಣೆಯನ್ನೊದಗಿಸುತ್ತದೆ. ಮಕ್ಕಳು ತೆವಳಲು, ಆಡಲು ಕಲಿಯುವ ದಿನಗಳಲ್ಲಿ ಮಗು ಪದೇ ಪದೇ ಖಾಯಿಲೆ ಬೀಳುವುದರಿಂದ, ಅದಕ್ಕೆ ಎದೆಹಾಲಿನ ಅವಶ್ಯಕತೆಯಿರುತ್ತದೆ. ಈ ಎದೆಹಾಲು ಪೌಷ್ಟಿಕಾಂಶವನ್ನು ತಾಯಿಂದಿರು ಮಕ್ಕಳಿಗೆ ಸರಿಯಾಗಿ ಎದೆಹಾಲನ್ನು ಉಣಿಸಿ, ಅವರ ಸುಖ ಶಾಂತಿಗೆ ದಾರಿ ಮಾಡಿಕೊಂಡಾರು.

-ಸಂಗಾತಿ

7 ನೇ ಪುಟದಿಂದ

ರಚನೆಯಾದ ಸಮಿತಿಗಳ ಮೂಲಕ ಮೂಲ ಮನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ವಿಭಕ್ತ ಕುಟುಂಬಗಳಾಗಿ ಈ ಮನೆತನಗಳಿಂದ ಹೊರ ಹೋಗಿ ಸ್ವಂತ ಆಸ್ತಿಗಳಲ್ಲಿ ನೆಲೆ ನಿಂತವರು ಈ ಮೂಲಸ್ಥಾನಗಳಲ್ಲಿ ನಡೆಯುವ ಪ್ರತಿಯೊಂದು ವಿಶೇಷಗಳಿಗೂ ಒಗ್ಗೂಡುತ್ತಾರೆ. ಆ ಮೂಲಕ ಐಕ್ಯತೆಯರಾಗಿ ಗೌಡರ ಐನ್‌ಮನೆಗಳು ವೈಶಿಷ್ಟ್ಯ ಪೂರ್ಣ ವಾಗಿರುವಂತೆ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಆಡಳಿತಾತ್ಮಕವಾಗಿಯೂ ಮಹತ್ವವವನ್ನು ಪಡೆದಿವೆ.

ಐನ್ ಮನೆಗಳು ಧಾರ್ಮಿಕ ಕೇಂದ್ರಗಳಾಗಿರುವಂತೆ, ಸಾಹಿತ್ಯ ಕಲೆಗಳ ಪ್ರೋತ್ಸಾಹದ ನೆಲೆಗಳೂ ಆಗಿದ್ದವು. ಯಕ್ಷಗಾನ, ತಾಳಮದ್ದಲೆ ಕೂಟಗಳು ನಾಲ್ಕಂಕಣದ ಮನೆಯ ಚಾವಡಿಗಳಲ್ಲಿ ನಡೆಯುತ್ತಿದ್ದುದನ್ನು ಈ ಮನೆಗಳ ಈಗಿನ ಹಿರಿಯರು ನೆನಪಿಸಿಕೊಳ್ಳುತ್ತಾರೆ.

ತಮ್ಮ ಅವಶ್ಯಕತೆಗಳಿಗೆ ಹೊಂದಿಕೊಂಡಂತೆ, ಸ್ಥಾನಮಾನಗಳಿಗೆ ತಕ್ಕಂತೆ ತಮ್ಮ ಮನೆಗಳನ್ನು ಗೌಡರು ನಿರ್ಮಾಣ ಮಾಡಿದ್ದಾರೆ. ತಮ್ಮ ಸಾಂಸ್ಕೃತಿಕ ವಿಧಿ ವಿಧಾನಗಳಿಗೆ ಅದನ್ನು ಸಕ್ರೀಯವಾಗಿ ಉಪಯೋಗಿಸಿಕೊಂಡ ಗೌಡರು ಮನೆಯನ್ನು ಆರಾಧನಾಭಾವದಿಂದ ನೋಡಿಕೊಳ್ಳುತ್ತಾರೆ. ಈ ನಾಲ್ಕಂಕಣದ ಐನ್‌ಮನೆಗಳ ಕುರಿತಾದ ಯಾವ ದಾಖಲೆಗಳೂ ಇತಿಹಾಸ ಕೃತಿಗಳ ಪುಟಗಳಲ್ಲಿ ದಾಖಲಾಗಿಲ್ಲ. ಒಂದು ಜನಾಂಗದ ಸಾಂಸ್ಕೃತಿಕ ಇತಿಹಾಸವನ್ನು ತಿಳಿದುಕೊಳ್ಳುವ ದಾಖಲಿಸುವ ದೃಷ್ಟಿಯಿಂದ ಗೌಡರ ಐನ್‌ಮನೆಗಳ ಅಧ್ಯಯನ ಮಹತ್ವಪೂರ್ಣವಾದ ಮಾಹಿತಿಯಾಗಿದೆ.

-ಪೂವಪ್ಪ ಕಣಿಯೂರು.

# ಗೌಡರ ಹಿನ್ನೋಟ

ಹದಿನೆಂಟು ವರ್ಷಗಳ ಹಿಂದೆ ಸುಳ್ಯದಲ್ಲಿ (24-02-1985) ಪ್ರಥಮವಾಗಿ ಒಂದು ಬೃಹತ್ ಗೌಡ ಸಮ್ಮೇಳನ ನಡೆಯಿತು. ಶ್ರೀ ಕ್ಷೇತ್ರ ಆದಿಚುಂಚನಗಿರಿ ಮಹಾ ಸಂಸ್ಥಾನವನ್ನು ನಮ್ಮ ಮಠವೆಂದೂ, ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರನ್ನು ನಮ್ಮ ಗುರುಗಳೆಂದು ಒಪ್ಪಿಕೊಂಡೆವು. ಅಂದು ಹುಟ್ಟಿದ ಶಿಶು ಇಂದು ಪ್ರಾಯ ಪ್ರಬುದ್ಧತೆ ಪಡೆದಷ್ಟು ಕಾಲ ಸಂದಿದೆ. ಅಂದಿನ ನಿರ್ಧಾರಕ್ಕೆ ಇದುವರೆಗೆ ಯಾರೂ ಎದುರಾಡಿದ್ದಿಲ್ಲ. ಸಾಕ್ಷಿ ಆಧಾರಗಳಿಲ್ಲದೆ, ವಿವೇಕ, ವಿವೇಚನೆಗಳಿಲ್ಲದೆ -"ಹಿಂದೆ ಶೃಂಗೇರಿ ಮಠಕ್ಕೆ ಗುರುಕಾಣಿಕೆ ಸಲ್ಲುತ್ತಿತ್ತು" ಎಂಬ ಐತಿಹ್ಯಗಳ ಹಳೆ ನೆನಪುಗಳನ್ನು ಕೆಲವು ಜನ ಹೇಳುತ್ತಿದ್ದಾರೆಂದು ತಿಳಿದು ಬಂದಿದೆ.

ಶೃಂಗೇರಿ ಇಡೀ ಹಿಂದೂ ಸಮಾಜಕ್ಕೆ ಸಂಬಂಧಿಸಿದ ಮಠವೆನ್ನುವುದನ್ನು ಅಲ್ಲಗಳೆಯುವಂತಿಲ್ಲ. ಗೌಡ ಸಾರಸತ್ವ ಬ್ರಾಹ್ಮಣರಿಗೆ, ಬಲ್ಲವರಿಗೆ, ದೈವಜ್ಞ ಬ್ರಾಹ್ಮಣರಿಗೆ ತಮ್ಮದೇ ಆದ ಗುರುಗಳಿದ್ದು, ಸಮಾಜ ಮುನ್ನಡೆಯನ್ನು ಕಾಣುತ್ತಿದೆ. ನಮ್ಮ ಜನಾಂಗದ ಈ ವರ್ಷದ ಗೌಡ ಸಮ್ಮೇಳನ ಯಶಸ್ವಿಯಾಗಲು ಯಾರು ಕಾರಣ ? ಮಠದಿಂದ ಸ್ವಾಮೀಜಿಗಳಿಂದ ನಮ್ಮ ಸಮಾಜಕ್ಕೆ ಎಷ್ಟೊಂದು ಗೌರವ, ಧೈರ್ಯ, ಸ್ಥೈರ್ಯಗಳು ಸಿಕ್ಕುತ್ತಿದೆ ಎನ್ನುವುದನ್ನು ಅರ್ಥ ಮಾಡಿಕೊಳ್ಳುವುದು ತೀರಾ ಅಗತ್ಯ.

ವರ್ಣಾಶ್ರಮ ಧರ್ಮ ದಕ್ಷಿಣ ಭಾರತದಲ್ಲಿ ಇರಲಿಲ್ಲ. ನಾವು ದ್ರಾವಿಡರು, ಗೌಡಾಳ್ವಿಕೆ ಇಲ್ಲಿಯ ಪದ್ಧತಿ, ಊರ ಗೌಡ, ಪಾಳೆಗಾರ, ಅರಸ ಚಕ್ರವರ್ತಿಗಳೆಲ್ಲ ಒಂದೇ ಜನಾಂಗ, ಕಾಲಕ್ರಮೇಣ ಕೆಲವರು ಜೈನರಾದರು. ಇನ್ನು ಕೆಲವರು ಲಿಂಗಾಯುತರಾದರು. ಅವರವರ ಕುಲಕಸುಬಿನಿಂದಾಗಿ ಅಗಸ, ಆಚಾರಿ, ಕುಂಬಾರ, ಚಮ್ಮಾರ ಹೀಗೆ ಹತ್ತು ಹಲವು ಜಾತಿಗಳಾಗಿ ವಿಂಗಡಣೆಗಳಾದುವು. ಜಾತಿಗಳಲ್ಲಿ ಮೇಲು ಕೀಳುಗಳೆಂಬ ಭಾವನೆಗಳನ್ನು ಹುಟ್ಟು ಹಾಕಿ ಅದನ್ನು ತಮ್ಮ ಅನುಕೂಲಕ್ಕೆ ಉಪಯೋಗಿಸುವ ದುಷ್ಟ ಪ್ರವೃತ್ತಿ ದಕ್ಷಿಣ ಭಾರತಕ್ಕೂ ಪಸರಿಸಿತು.

ಇದನ್ನು ಗೌಡ ಜನಾಂಗದ ಹಿರಿಯರು ಸಂಘಟಿತರಾಗಿ ವಿರೋಧಿಸಿದಕ್ಕೆ ಸಿದ್ಧವೇಷವೇ ಸಾಕ್ಷಿ. ಡಾ. ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯಗಳು ಈ ಕೆಳಗಿನಂತೆ ಇವೆ. (ಕರಾವಳಿ ಜಾನಪದ 1990 ಪುಟ 23, 24, 26)

ಸಿದ್ಧವೇಷ ಕುಣಿಯುವ ಗೌಡ ಜನಾಂಗದವರು ಗೊರವನ ಪೂಜೆ ಮಾಡುತ್ತಾರೆ. ಇದು ಶೈವ ಪರಂಪರೆಗೂ, ಸಿದ್ಧವೇಷಕ್ಕೂ, ಗೌಡರಿಗೂ ಇರುವ ಸಂಬಂಧವನ್ನು ಗುರುತಿಸಲು ಸಹಾಯ ಮಾಡುವ ಅಂಶ. ಗೌಡರು ಕದಿರಿಗೂ ವಿಶೇಷ ಗೌರವ ಸಲ್ಲಿಸುತ್ತಾರೆ. ಬಯಲು ಸೀಮೆಯ ಒಕ್ಕಲಿಗರು ಆದಿಚುಂಚನಗಿರಿಗೆ ಗೌರವ ಸಲ್ಲಿಸುವುದೂ ಇದಕ್ಕೆ ಪೂರಕವಾದ ಅಂಶ.

ಸಿದ್ಧವೇಷದಲ್ಲಿ ದಾಸಯ್ಯ ಮತ್ತು ಬ್ರಾಹ್ಮಣ್ಯದ ನಿರಾಕರಣೆಯಿದೆ. ಇದು ವೈಷ್ಣವ ಮತ್ತು ಪುರೋಹಿತಶಾಹಿ ಪರಂಪರೆಯ ನಿರಾಕರಣೆಯೂ ಹೌದು. ಉಚ್ಚ ವರ್ಗದ ಪಾಂಡಿತ್ಯಪೂರ್ಣ ವಿಚಾರ ಪರಂಪರೆಗೆ ವಿರುದ್ಧವಾಗಿ ವಿಜೃಂಭಿಸಿದ ವೈದಿಕೇತರ ಸಂಪ್ರದಾಯದ ಪಳೆಯುಳಿಕೆಯಾಗಿ ಇಂದು ಸಿದ್ಧವೇಶ ಉಳಿದಿದೆ.

ಗೌಡರೂ ಕಾಲಭೈರವನನ್ನು ಕೆಂಚಿರಾಯನೆಂಬ ಹೆಸರಿನಲ್ಲಿ ಆರಾಧಿಸಿಕೊಂಡು ಬರುತ್ತಿದ್ದಾರೆ. "ಕಾಶಿಗೆ ಹೋದರೆ ವಿಶ್ವನಾಥನನ್ನು ನೋಡದಿದ್ದರೂ ಕಾಲಭೈರವನನ್ನು ನೋಡಬೇಕು." ಎಂಬ ಹೇಳಿಕೆಯೊಂದು ಗೌಡರಲ್ಲಿ ಬಳಕೆಯಲ್ಲಿದೆ.

ಈ ನಡುವೆ ಹತ್ತೊಂಬತ್ತನೇ ಶತಮಾನದ ಕೊನೆಯಲ್ಲಿ ವೈದಿಕ ಹಿತಾಸಕ್ತಿಗಳ ಶೃಂಗೇರಿ ಮತ್ತು ತಿರುಪತಿಗಳನ್ನು ಗೌಡ ಜನಾಂಗದಲ್ಲಿ ಪ್ರಚಾರಕ್ಕೆ ತರಲು ಪ್ರಯತ್ನ ನಡೆಸಿದರು. ಶೃಂಗೇರಿಯಿಂದ ವಾರ್ಷಿಕ ಪಸಲು ವಸೂಲಿಗೆ ಅಧಿಕಾರ ಪತ್ರ ಕೆಲವರಿಗೆ ಬರುತ್ತಿತ್ತು. ಆದರೆ ಇದನ್ನು ಜನಾಂಗದ ಹಿರಿಯರು ಒಮ್ಮತದಿಂದ ನಿರಾಕರಿಸಿದ್ದರು. ಹರಿಸೇವೆ ಮಾಡಿಸಿದ ನಂತರ ಕೆಂಚಿರಾಯ ಸೇವೆ ಮಾಡಿಸಲೇ ಬೇಕೆಂಬುದಾಗಿ ವಿಧಿಸಿದ್ದರು.

ಹಾಗೆಯೇ ಗೌಡ ಜನಾಂಗವು ಪುರುಷ ಭೂತದ ಆರಾಧಕರೆಂಬುದನ್ನು ಗಮನಿಸಬೇಕು. ಪುರುಷ ಭೂತವು ಕಾಶೀಮಠ, ಕದ್ರಿಮಠ ಮುಂತಾದ ನಾಥ ಪಂಥದ ಮಠಗಳನ್ನು ಹೇಳಿಕೊಳ್ಳುತ್ತದೆ. ಕಂದ್ರಪ್ಪಾಡಿಯ ಸ್ಥಳ ಪುರಾಣದ ಅಧ್ಯಯನದಿಂದ ಗೌಡರು ಸಾವಿರಾರು ವರ್ಷಗಳ ಹಿಂದೆಯೇ ಈ ಪ್ರದೇಶದಲ್ಲಿ ನೆಲೆಸಿದ್ದಾರೆಂದು ತಿಳಿದು ಬರುತ್ತದೆ. ಇತ್ತೀಚೆಗೆ ಈ ಸಾಂಸ್ಕೃತಿಕ ಘಟಕದಿಂದ ಕಳಚಿಕೊಂಡು ಕೆಲವು ಭೂಪ್ರದೇಶ ಕೊಡಗು ಮತ್ತು ಕೇರಳಕ್ಕೆ ಸೇರಿದ್ದೆಂದು ಗುರುತಿಸಲ್ಪಡುತ್ತಿದೆ. ಉಳ್ಳಾಕುಳು ಕೆಲವುಗೌಡ ಮನೆತನಗಳ ಕುಲದೇವರು. ಪೂಮಾನಿ, ಕಿನ್ನಿಮಾನಿ ಸಹೋದರರು ಎರಡು ಸಾವಿರ ವರ್ಷಗಳ ಹಿಂದೆ ಜೀವಿಸಿದ್ದ ಐತಿಹಾಸಿಕ ವ್ಯಕ್ತಿಗಳು.

ಗೌಡರು ವಿಜಯನಗರದಿಂದ ನಾನೂರು ವರ್ಷಗಳ ಹಿಂದೆ ಇಲ್ಲಿ ಬಂದು ನೆಲೆಸಿದರೆನ್ನುವುದು ಆಧಾರ ರಹಿತ ತಪ್ಪು ಮಾಹಿತಿ. ಇದನ್ನು ಒಪ್ಪಿಕೊಳ್ಳುವುದು ಸರಿಯಲ್ಲ.

ಶೈವ ಮತ್ತು ವೈಷ್ಣವರ ನಡುವಿನ ಸೆಣಸಾಟ ಕೇವಲ ಗೌಡರಿಗೆ ಮಾತ್ರ ಸೀಮಿತವಾಗಿಲ್ಲ. ೧೯ನೆಯ ಶತಮಾನದ ಪುರಿ ಜಗನ್ನಾಥ ಮತ್ತು ಛತ್ತೀಸಘಡದ ಅಸ್ಪಶ್ಯರ ಧಾರ್ಮಿಕ ದಂಗೆಯನ್ನು ಕುರಿತ ಅಧ್ಯಯನ "ದಾರು ಪ್ರತಿಮಾನ ಪೂಜಿವೇ" (ಕಟ್ಟಿಗೆಯ ದೇವರನ್ನು ನಾನು ಪೂಜಿಸುವುದಿಲ್ಲ) ನೆಂಬ ಲೇಖನ ಸಂಗ್ರಹವನ್ನು ಅಕ್ಷರ ಪ್ರಕಾಶನ 1993 ರಲ್ಲಿ ಹೊರತಂದಿದೆ. ಇದರ ಹಿನ್ನುಡಿಯಲ್ಲಿ ಡಿ. ಆರ್. ನಾಗರಾಜ್ ಹೀಗೆ ಹೇಳಿದ್ದಾರೆ.

ವರ್ಣಾಶ್ರಮ ಧರ್ಮದ ವ್ಯವಸ್ಥೆ ಕ್ರೂರವೂ, ಜಡವೂ ಆಗಿಬಿಟ್ಟ ಮೇಲೆ ಅದರಿಂದ ಅವಮಾನಕ್ಕೆ ಒಳಗಾದ ಕೆಳ ಜಾತಿಗಳು ಪ್ರತಿಭಟನೆಯ ನಾನಾ ಮಾರ್ಗಗಳನ್ನು ಹುಡುಕಿ ಕೊಳ್ಳತೊಡಗಿದವು. ಕ್ರಿ. ಶ. ೮ ನೇ ಶತಮಾನದ ಮೇಲಂತೂ

13 ನೇ ಪುಟಕ್ಕೆ

ಹತ್ತು ಕುಟುಂಬ ಹದಿನೆಂಟು ಗೋತ್ರದ ಬಗ್ಗೆ ಸಂಶೋಧನೆ ಆದಾಗ ತಿಳಿಯುದದರ ಮರ್ಮ.

# ಅರೆಬಾಸೆಲಿ ಮಕ್ಕಳಿಗಾಗಿ ಮಹಾ ಭಾರತ

ಭಾಗ - 1 (ಬರೆದವು : ಪ್ರೊ|| ಪೂಜಾರಿ ಮೊಣ್ಣಪ್ಪ, ಬೆಂಗಳೂರು)

*(ಬರ್ದವರ ಎರಡ್ ಮಾತ್ :)* ಈಗಿನ ಕಾಲಲಿ ಮಕ್ಕ ರಾಮಾಯಣ ಮಹಾಭಾರತ ಮತ್ತೆ ಪುರಾಣ ಕತೆಗಳ್ನ ಪಾಠ ಪುಸ್ತಕಲಿ ಮಾತ್ರ ಓದಿವೆ ಹೊರ್ತ್ ಆ ಗ್ರಂಥಗಳ್ನ ಅವಾಗಿಯೇ ಓದುವ ಅಭ್ಯಾಸ ಬಾಳಾ ಕಮ್ಮಿ ಆವುಟು. ಹಂಗೆ ಮಕ್ಕಳಿಗೆ ಮಹಾಭಾರತ ಅರೆಬಾಸೆಲಿ ಬರ್ದ್ ಇದೇ ರೀತಿ ವಿದ್ಯಾವಂತ ಗೂಡೆಗ ಹೈದಂಗ ಸಹ ಬರಿಯಕ್ಕೆ ಮನ್ಸ್ ಮಾಡ್ಲಿಂತೇಳಿ ಇದರ್ನ ಬರಿತೊಳೊ)

ವ್ಯಾಸ ಮಹರ್ಷಿಗೆ ಅವುಕೆ ಗೊತ್ತಿರುವ ಮಹಾಭಾರತನ ಬರಿಯುವ ವಿಷಯಲಿ ಬ್ರಹ್ಮನ ಕುರ್ತ್ ತಪಸ್ ಮಾಡ್‌ಕನ ವ್ಯಾಸ ಮಹರ್ಷಿಗೆ ಪ್ರತ್ಯಕ್ಷ ಆಗಿ ಈ ಕೆಲ್ಸನ ಶ್ರೀ ವಿದ್ಯಾಗಣಪತಿನ ಮುಲ್ಕ ಮಾಡ್ತ್ತೇಳಿ ಹೇಳ್ತ್. ಅದೇ ಪ್ರಕಾರಲಿ ಶ್ರೀ ಗಣಪತಿನ ಗ್ಯಾನ ಮಾಡ್ತ್. ಗಣಪತಿ ಪ್ರತ್ಯಕ್ಷ ಆಗಿ ಒಪ್ಪಿಕಂಡ್ ವ್ಯಾಸ ಮುನಿ ಹೇಳ್ದಂಗೆ ಬರ್‌ದನೆಂತ್ತೇಳಿ ಹೇಳ್ತ್. ಆದ್ರೆ ಹೇಳ್‌ಕಾಕನ ಎಲ್ಲಿಯೂ ನಿಲ್ಲಿಸಿ ಕಾಗದ್ತ್ತೇಳಿ ವ್ಯಾಸ ಮುನಿಗೆ ಹೇಳ್ದ್. ಹಂಗೆ ಅವಿಬ್ಬರ್ ಒಪ್ಪಿಕಂಡ್ ಮಹಾಭಾರತ ಕಥೆನ ಮುಗ್ಸುವೆ. ವೇದವ್ಯಾಸ ಸುರುಲಿ ಅವರ ಮಜ್ಞ ಶುಕು ಮುನಿಗೆ ಹೇಳ್ತ್. ಅದಾದ ಮ್ಯಾಲೆ ನಾರದ ಮುನಿಗೂ ಹೇಳ್ತ್. ನಾರದ ದೇವತೆಗಳಿಗೆಲ್ಲಾ ಸಾರ್ತ್.

ಶುಕು ಮುನಿ ಗಂಧರ್ವ, ರಾಕ್ಷಸ ಮತ್ತೆ ಯಕ್ಷಂಗಗಳಿಗೂ ಹೇಳ್ತ್. ಅಲ್ಲದೆ ವ್ಯಾಸರ ಪರಮ ಶ್ರೇಷ್ಠ ಶಿಷ್ಯ ವೈಸಂಪಾಯಂಗೂ ಹೇಳ್ತ್. ವೈಸಂಪಾಯನ ರುಸಿ ಪಾಂಡವರ ಪಿಳ್ಳಿ ಪರಿಸ್ಕೃತ ರಾಜನ ಮಜ್ಞ ಜನಮೇಜಯಂಗೂ ಹೇಳ್ತ್. ಹಂಗಾಗಿ ಮಹಾಭಾರತನ ವೈಸಂಪಾಯನ ರುಸಿ ಜನ ಮೇಜಯಂಗೆ ಹೇಳ್ದ ಕತೆನೇ ನಾವ್ ಈಗ ಓದುತ್ತಿರ್ದು.

ಸಂತನು : ಭರತ ವಂಶದ ಸಂತನು ಹಸ್ತಿನಾಪುರದ ದೊರೆಯಾಗಿ ಆಳ್ತ್ತಿತ್ತ್. ಸಂತನು ಗಂಗಾನದಿ ದಡಲಿ ತಿರ್ಗಾಡಿಕಂಡ್ ಇರ್‌ಕಾಕನ ಒಂದು ಪೊರ್ಲ್ನ ಗಂಗೆ ಕನ್ನೆ ನಿತ್ತದ್ ಕಂಡ್, ಅವಳ ಪೊರ್ಲಿಗೆ ಮನಸ್ ಸೋತ್, ಅವ್ಳ ಮ್ಯಾಲೆ ಪ್ರೀತಿ ಹುಟ್ಟಿ, ಅವ್ಳ ಮದುವೆ ಆಕೆ ಕೇಳ್ತ್. ಗಂಗೆ ಅದ್‌ಕೆ ಕೆಲವ್ ಶರತ್ ಹಾಕಿ ತಾನ್ ಯಾರ್, ಎಲ್ಲಿಂದ ಬಂದದ್ತ ಕೇಳದೆ, ತಾನ್ ಮಾಡ್ವ ಕೆಲ್ಸಗಳ್ಗೆ ತಡೆ ಬಾರದಿದ್ದರೆ ಮದುವೆ ಆನೆತೇಳ್ದಕ್ಕೆ ಸಂತನು ಒಪ್ಪಿ, ಮದುವೆ ಆಗಿ ಸುಮಾರ್ ವರ್ಷಗಳವರ್ಗೆ ಜೀವನ ಮಾಡ್‌ತಿದ್ದೊ. ಇವುಕ್ಕೆ ಹುಟ್ಟಿದ ಮಕ್ಕಳ್ನೆಲ್ಲಾ ಗಂಗೆ ಗಂಗಾನದಿಗೆ ಬಿಸಾಡ್‌ತಿತ್ತ್. 8ನೇ ಕೂಸುನ ಆ ರೀತಿ ಬಿಸಾಡಿಕೆ ಹೋಕನ ಸಂತನು ಗಂಗೆನ ತಡ್ದ್ ಕೂಸ್‌ನ ಹೊಳ್ಗೆ ಹಾಕ್ ಬ್ಯಾಡತ್ತೇಳ್ತ್. ಆಗ ಗಂಗೆ ಸಂತನ ಕೇಳ್ತ್. ಪ್ರಿಯ- ನಿನ್ನ ಒಪ್ಪಂದ ಏನಾತ್? ನೀನ್ ಮಾತಿಗೆ ತಪ್ಪಿಯೊಳಾ. ಹಂಗಾಗಿ ಈ ಕೂಸುನ ಮತ್ತೆ ನಿನ್ನ ಬಿಟ್ಟ್ ಹೋನೆಂತೇಳಿ ಆ ಕೂಸುನ ಅವ್ನ ಹತ್ರ ಬುಟ್ಟ್ ಮಾಯ ಆತ್. ಹೋಕೆ ಮುಂದೆ ಆ ಹೆಂಙ್ ಯಾರ್ ? ಅವ್ಳ ಎಲ್ಲಿಂದ ಬಂದತ್‌ತೇಳ್ದರ ಕತೆ ಹೇಳ್ತ್.

ಆ ಹೆಂಙ್‌ನ ಪ್ರಕಾರ ಅವ್ಳ ಗಂಗಾದೇವಿತ ಯಿ ಹಿಂದೆ ವಸುಯೆಂಬ ಗುಂಪುನವು ಲೋಕ ಸುತ್ತಿರ್‌ಕಾಕನ ಎಂಟ್ ಜನ ಅವ್ರ ಹೆಂಙ್‌ಗಳೊಟ್ಟಿಗೆ ತಿರ್‌ಗಾಡ್ತ್ತಿರ್‌ಕನ ವಸಿಷ್ಟ ರುಸಿಯ ಆಶ್ರಮಕೆ ಬಂದಿದ್ದೊ. ಆಗ ವಸಿಷ್ಟ ರುಸಿ ಅಲ್ಲಿ ಇತ್ತ್‌ಲೆ. ಆಶ್ರಮದ ಹತ್ರ ನಂದಿನಿ ಹಸ್ ತನ್ನ ಕರ್‌ನೊಟ್ಟಿಗೆ ಮೇಯಿತಾ ಇತ್ತ್. ಇದರ್ನ ನೋಡಿ ಪ್ರಭಾಸ್ ಎಂಬ ವಸುನ ಹೆಂಙ್ ನಂದಿನಿನ ನೋಡಿ ಅದರ್ನ ಇಲ್ಲಿಂದ ಹೊಡ್ಕಂಡ್ ಅವು ಇರ್ವ್ರಲ್ಲಿಗೆ ಹೋಕುತ ಹಠಮಾಡಿ ಅದನ್ನ ಅಲ್ಲಿಂದ ಹೊಡ್ಕೊಂಡೊದೋ. ಸ್ವಲ್ಪ ಸಮಯಲಿ ವಸಿಸ್ಟ ರುಸಿ ಆಶ್ರಮಕೆ ಬಂದ್ ನೋಡ್ಕನ ನಂದಿನಿ ಹಸ್ ಕಾಣದಿಕ್ಕನ ಅವ್ರ ದಿವ್ಯ ದೃಷ್ಟಿಂದ ನೋಡ್‌ಕನ ವಸುನ ಪಂಗಡದವು ನಂದಿನಿನ ಹೊಡ್ಕಂಡ್ ಹೋದ್‌ತ ಗೊತ್ತಾಗಿ ಇದ್ ವಸುಗಳ್ಗೆ ಗೊತ್ತಾಗಿ ವಸಿಷ್ಟ ರುಸಿನ ಹತ್ರ ಬಂದ್ ರುಸಿ ಕಾಲಿಗೆ ಅಡ್ಡಬಿದ್ದ್ ಬೇಡಿಕಂಡವೆ. ಅವ್ರ ಶಾಪ ಹಾಕಿದ ವಿಸಯ ವಸುಗಳ್ಗೆ ಗೊತ್ತಾಗಿ ವಸಿಷ್ಟ ರುಸಿನ ಹತ್ರ ಬಂದ್ ರುಸಿ ಕಾಲಿಗೆ ಅಡ್ಡಬಿದ್ದ್ ಬೇಡಿಕಂಡವೆ. ಅವ್ರ ಶಾಪ ಹಾಕಿದ್ ನಡ್ದೇ ನಡ್ದದೆ ಅದರ್ನ ತಪ್ಪಿಸಿಕಾದುಲೆ, ಆದ್ರೆ ಸ್ವಲ್ಪ ಕಮ್ಮಿ ಮಾಡಕ್ ಆದ್ರೂ ವಸುಗ ಎಲ್ಲಾ ಭೂಲೋಕಲಿ ಹುಟ್ಟಕು, ಹುಟ್ಟಿದ ಕೂಡ್ಲೆ ಸತ್ತ್ ಪುನಃ ವಸುಗಳಾಕ್. ಆದ್ರೆ 8 ನೇ ವಸು ಮಾತ್ರ ಅಲ್ಲೇ ಬದುಕಿ ಉಳ್ದ್ ಮನಸ್ಸ ಜನ್ಮನ ತಾಳಿ ಕೊನೆವರೆಗೂ ಸಹ ಅಲ್ಲಿಯೇ ಇರಕು. ಈ ರೀತಿ ಪ್ರಭಾಸ್ ಎಂಬ ವಸು ನರಜನ್ಮಲಿ ಇದ್ದದೆತ 8 ನೇ ಕೂಸ್‌ನ ಕರ್‌ಕಂಡ್ ಮಾಯಾಗಿ ಹೋತ್. ಆ ಕೂಸ್‌ನ ವಸಿಷ್ಟ ಮುನಿಯ ಆಶ್ರಮಲಿ ಬುಟ್ಟ್ ಅಲ್ಲಿ ಆ ಕೂಸಿಗೆ ಯಲ್ಲಾ ರೀತಿಯ ವಿದ್ಯೆಗಳನ್ನ ಹಂಗೂ ಬಿಲ್ ವಿದ್ಯೆಲಿ ಯಲ್ಲಾ ರೀತಿಯ ತರಬೇತಿ ಕೊಡ್ಸಿತ್.

ಒಂದ್ ದಿನ ಸಂತನು ಗಂಗಾನದಿಯ ಏರಿಲಿ ತಿರ್‌ಗಾಡ್ತ್‌ರ್‌ಕನ ಒಂದ್ ಕೂಸ್ ಗಂಗಾ ನದಿನ ಎರಡ್ ದಂಡೆಗಳ್ನ ಬಾಣಗಳಿಂದ ಸೇತುವೆ ಮಾಡಿ ಆಟ ಆಡ್ತಾ ಇತ್ತ್. ಅದರ್ನ ಸಂತನು ನೋಡಿ ಅಚ್ಚರಿ ಪಟ್ಟಿತ್. ಅಸ್ಟ್ ಹೊತ್ತಿಗೆ ಗಂಗಾದೇವಿ ಪ್ರತ್ಯಕ್ಷ ಆಗಿ ಸಂತನುನ ಕಂಡ್ ಇವನೇ ನಂಗೂ ನಿಂಗೂ ಹುಟ್ಟಿದ 8ನೇ ಕೂಸು. ಇವನ ವಸಿಸ್ಟ ರುಸಿ ಹತ್ರ ಕರ್ಕಂಡ್ ಹೋಗಿ ಈ ಕೂಸ್‌ನ ಯೆಲ್ಲಾ ವಿದ್ಯೆಗಳ್ಲಿ ನಿಪುಣನಾಗಿ ಮಾಡ್ಸಿಯೋಳೆ. ಇನ್ನ್ ಈ ಕೂಸ್‌ನ ನಿನ್ನ ವಸಕೆ ಬುಟ್ಟೋಳೊ. ಇವ್ನ ಹೆಸ್ರ್ ದೇವಾವರತಂತ್ತೇಳಿ ಮಾಯ ಆತ್.

ಮುಂದುವರ್ದದೆ.

# ಗೌಡರೆಲ್ಲರೂ ಒಕ್ಕಲಿಗರಾದರೆ ಸತ್ಯ ಸುಳ್ಳಾಗಲಿದೆ

ವಿಶಾಲ ಭಾರತವನ್ನು ಪರಿಚಯಿಸಿಕೊಳ್ಳುವುದು ಸಾಮಾನ್ಯ ಪ್ರಜೆಗಳಿಗೆ ಸಾಧ್ಯವಾಗುವ ವಿಷಯವಲ್ಲ. ಸಾಮಾನ್ಯ ಪ್ರಜೆಗಳೇಕೆ, ವಿದ್ಯಾವಂತರಿಗೂ ಅಷ್ಟೊಂದು ಸುಲಭ ಸಾಧ್ಯದ ಕೆಲಸವಲ್ಲ. ಹೀಗಿದ್ದರೂ ದೇಶದ ವಿದ್ಯಾವಂತ ಅಧಿಕಾರಿಗಳು ಹುಟ್ಟೂರಿನಿಂದ ಸಾವಿರಾರು ಕಿಲೋಮೀಟರ್ ದೂರದ ಸ್ಥಳಗಳಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ರಾಜ್ಯಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವುದನ್ನು ನಾವು ಕಾಣುತ್ತಿರುವೆವು. ಅದೆಷ್ಟೋ ಸಲ ನಮಗೆ ಆಶ್ಚರ್ಯಕರವಾಗಿ ಕಾಣುವ ರೀತಿಯಲ್ಲಿ ಉತ್ತರ ಪ್ರದೇಶದ ಇಲ್ಲವೆ ಪಂಜಾಬ್, ಹರಿಯಾಣದ ಒಬ್ಬ ಭಾರತೀಯ ಆಡಳಿತ ಸೇವೆಯಲ್ಲಿ, ಸೇವೆಗೈಯುವ ಅಧಿಕಾರಿ ನಮ್ಮ ರಾಜ್ಯವಾದ ಕರ್ನಾಟಕದಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿರುವುದನ್ನೂ ಕಾಣುತ್ತಿರುವೆವು. ಇದು ಹೇಗೆ ಸಾಧ್ಯವಾಯಿತೆಂದು ನಾವು ಆ ಅಧಿಕಾರಿಯ ಕಾರ್ಯವೈಖರಿಯನ್ನು ಕಂಡು ಮೂಗಿನ ಮೇಲೆ ಬೆರಳಿಡುವಂತೆ ಮಾಡಿದ ಸಂದರ್ಭಗಳೂ ಬಂದಿರಬಹುದು. ಭಾರತೀಯ ಆಡಳಿತ ಸೇವೆಯ ಪರೀಕ್ಷೆಯಲ್ಲಿ ತೇರ್ಗಡೆಯಾದವರು ತುಂಬಾ ಬುದ್ಧಿವಂತರೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಕೆಲವೊಮ್ಮೆ ಮಧ್ಯ ತರಗತಿಯ ವಿವಿಧ ಕ್ಷೇತ್ರದ ಅಧಿಕಾರಿಗಳೂ ಈ ಚುರುಕುತನವನ್ನು ಪ್ರದರ್ಶಿಸುವುದನ್ನೂ ನಾವು ಕಾಣುತ್ತಿದ್ದೇವೆ. ಏಕೆಂದರೆ ಇವರೆಲ್ಲರಿಗೂ ಮಾಹಿತಿ ಒದಗಿಸುವಂತಹ ಒಂದು ಮಾರ್ಗದರ್ಶಿಯಂತಿರುವ "ಗೆಜ್ಹೇಟಿಯರ" ಎಂಬ ಅತಿ ವಿವರಣೆ ಹೊಂದಿರುವ ಒಂದು ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ ಹಾಗೂ ಆರ್ಥಿಕ ವಿಷಯಗಳನ್ನೊಳಗೊಂಡ ಟಿಪ್ಪಣಿ ರೂಪದ ದಾಖಲೆಗಳುಳ್ಳ ಪುಸ್ತಕವನ್ನು ನಮ್ಮ ದೇಶದ ಪ್ರತಿ ರಾಜ್ಯದ ಎಲ್ಲ ಜಿಲ್ಲೆಗಳ ಬಗೆಗೆ ಸರಕಾರವು ನೂರಾರು ವರ್ಷಗಳಿಂದ ಹೊರ ತರುತ್ತಿದೆ. ಇದೊಂದು ದೇಶದ ಕುಂಡಲಿ. ಇದರಲ್ಲಿ ಇಲ್ಲದ ವಿಷಯಗಳಿಲ್ಲ. ಇದೊಂದು ಜ್ಞಾನ ಬೋಧಕ. ಇದೊಂದು ವಿಷಯಗಳ ಅಕ್ಷಯ ಪಾತ್ರೆ, ಈ ಗೆಜ್ಹೇಟಿಯರ ಒಂದು ಜಿಲ್ಲೆಯ ನೆಲ, ಜಲ, ಮಳೆ, ಬೆಳೆ, ಜನರು, ಅವರ ಆಚಾರ ವಿಚಾರಗಳು, ಅವರು ಪೂಜಿಸುವ ದೈವ ದೇವರುಗಳು, ಹುಟ್ಟಿನಿಂದ ಸಾವಿನ ತನಕದ ಸಾಮಾಜಿಕ ಪರಂಪರೆಗಳು -ಆಚಾರ-ವಿಚಾರಗಳು-ವಿದ್ಯಾಮಾನಗಳು ಆರ್ಥಿಕ ಸ್ಥಿತಿಗತಿಗಳು ಇತ್ಯಾದಿ ಇತ್ಯಾದಿಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ಇದೊಂದು ಜಿಲ್ಲಾಮಟ್ಟದ ಜಾತಕ. ಈ ಒಂದನ್ನು ಪ್ರಕಟಿಸುವ ಕಾರ್ಯಕ್ರಮವು ನಮ್ಮನ್ನಾಳಿದ ಆಂಗ್ಲರು ಬಿಟ್ಟುಹೋದ ಅತಿ ಪ್ರಯೋಜನಕಾರಿ ಸುಧಾರಣಾ ಪದ್ಧತಿ.

ನಾವು ಯಾರು, ಏನು ಎಂಬುದನ್ನು ತಿಳಿಯದವರು, ತಿಳಿದಿದ್ದರೂ ಇನ್ನೊಬ್ಬರಿಗೂ ತಿಳಿಯಪಡಿಸುವಂತೆ ಹೇಳಲು ಅಸಾಧ್ಯವಾದವರಿಗೆ ಈ ಗೆಜ್ಹೇಟಿಯರ್ "ಭಗವದ್ಗೀತೆಗೆ" ಸಮಾನ. ಯಾವುದೇ ಒಂದು ಊರಿನ ಯಾವುದಾದರೊಂದು ಜನಾಂಗದ ಇಲ್ಲವೇ ಜಾತಿಯ, ಜಾತಿಯಲ್ಲಿನ ಉಪ ಪಂಗಡಗಳನ್ನು ಅರಿತುಕೊಳ್ಳುವ ಅವಶ್ಯಕತೆ ಬಂದಾಗ ಗೆಜ್ಹೇಟಿಯರ್ ನಿಮ್ಮ ಎಲ್ಲಾ ಸಂಶಯಗಳನ್ನು ನಿವಾರಿಸುವುದು. ಈ ದಿಶೆಯಲ್ಲಿ ಇದೊಂದು ಸರಕಾರದಿಂದ ಮಾನ್ಯತೆ ಹೊಂದಿದ ದಾಖಲಾ ಹೊತ್ತಿಗೆ. ನಿಮಗೆ ನೀವ್ಯಾರೆಂದು ಅನುಮಾನ ಬಂದಾಗ ಖುದ್ದು ನೋಡಿ ನಿಮ್ಮನ್ನು ನೀವು ತಿಳಿದು ಕೊಳ್ಳಬಹುದಾದ ಲಿಖಿತ ದಾಖಲೆ. ಜಿಲ್ಲೆಗಳು ಪ್ರಗತಿಯತ್ತ ಹೋಗುತ್ತಿರುವ ಸಂದರ್ಭಗಳಲ್ಲಿ ಈ ಗಜೇಟಿಯರನ್ನು 5-6 ವರ್ಷಕ್ಕೊಮ್ಮೆ ಸರಿಪಡಿಸಿ ಪ್ರಸ್ತುತ ಅಂಶಗಳನ್ನೊಳಗೊಂಡ ಹೊಸ ಗೆಜ್ಹೇಟಿಯರ್ ಪ್ರತಿಗಳನ್ನು ಹೊರ ತರಲ್ಪಡುತ್ತಿದೆ. ಇದನ್ನು ಆಯಾ ಜಿಲ್ಲೆಯ ಮಾತೃ ಭಾಷೆಯಲ್ಲೂ ಇಂಗ್ಲೀಷಿನಲ್ಲೂ ಮುದ್ರಿಸಲಾಗುವುದು.

ಸೃಷ್ಟಿಯಲ್ಲಿ ಎಲ್ಲರೂ ಸರಿಸಮಾನರಾಗಿ ಜನಿಸುವುದಿಲ್ಲ. ಕೆಲವರು ಹುಟ್ಟಿನಿಂದಲೇ ಆಗರ್ಭ ಸಿರಿವಂತರಾಗಿಯೂ, ಇನ್ನುಳಿದವರು ಕಡು ಬಡವರಾಗಿ ಅಥವಾ ಮಧ್ಯಮ ವರ್ಗದವರಾಗಿ ಜನಿಸುವುದು ಪ್ರಕೃತಿಯ ವೈಶಿಷ್ಟ್ಯತೆ. ಇದರಲ್ಲಿ ಯಾರ ಹಸ್ತಕ್ಷೇಪವೂ ಇರುವುದಿಲ್ಲ. ಆದರೆ ಜನ್ಮ ತಾಳಿದ ಬಳಿಕ ಪ್ರತಿಯೊಬ್ಬ ವ್ಯಕ್ತಿಗೂ ಪ್ರತಿಯೊಂದು ಮಗುವಿಗೂ ಅವರವರಿಗೆ ಒದಗಿ ಬರುವ ಹಿನ್ನಲೆ ಇದ್ದೇ ಇರುತ್ತದೆ. ಈ ವಿಶಾಲ ಪೃಥ್ವಿಯಲ್ಲಿ ಜನ ಜೀವನ ಅದೊಂದು ವಿಸ್ಮಯದ ಶೃಂಖಲೆ. ಪ್ರತಿಯೊಬ್ಬ ಪ್ರಜೆಯೂ ಬಾಹ್ಯ ಪ್ರಪಂಚದ ವಾತಾವರಣಕ್ಕೆ ಕೌಟುಂಬಿಕ ಹಿನ್ನಲೆಗೆ ಹುಟ್ಟಿನಿಂದ ಪಡೆದ ಆರೋಗ್ಯಕ್ಕೆ, ರೋಗ ರುಜಿನಗಳಿಗೆ ಆರ್ಥಿಕ ಹಾಗೂ ಶೈಕ್ಷಣಿಕ ನಿಯಮಾವಳಿಗಳಿಗೆ ಒಳಪಟ್ಟಿರುತ್ತಾರೆ. ಆದುದರಿಂದ ಒಬ್ಬನಂತೆ ಇನ್ನೊಬ್ಬನಿಲ್ಲ. ಹುಟ್ಟು ಬಯಸಿ ಬರುವುದಿಲ್ಲ. ಇದೊಂದು ಪ್ರಕೃತಿಯ ಘಟನೆ. ಆದುದರಿಂದ ಹುಟ್ಟಿನ ಆಧಾರದ ಮೇಲೆ ಯಾರನ್ನೂ ಕೀಳಾಗಿ ಅಥವಾ ಮೇಲಾಗಿ ಪರಿಗಣಿಸುವುದು ಮಾನವ ಹಕ್ಕಲ್ಲ. ಬದಲಾಗಿ ಎಲ್ಲರನ್ನೂ ಸರಿ ಸಾಮಾನವಾಗಿ ನೋಡಿಕೊಳ್ಳುವುದು ಸಮಾಜದ ಹೊಣೆಗಾರಿಕೆ. ಈ ದಿಶೆಯಲ್ಲಿ ಅನಾದಿಕಾಲದಿಂದಲೂ ಶಾಪಗ್ರಸ್ಥರಾದ ನಮ್ಮ ಸಹೋದರ ಸಹೋದರಿಯರನ್ನು ಅನುಕಂಪದಿಂದ ನಮ್ಮೊಂದಿಗೆ ಬೆರೆತು ಬಾಳುವಂತೆ ಮಾಡುವುದು ಸಮಾಜದ ಪ್ರತಿಯೊಬ್ಬ ಚಿಂತನಾಶಕ್ತಿಯುಳ್ಳವನ ಕರ್ತವ್ಯ. ರಾಜ ರಾಜಾಧಿಕಾಲ ಗಳಿಂದಲೂ, ಆರಿಸಿ ಬಂದ ಸರಕಾರಗಳಿಂದಲೂ ಈ ಬಗೆಗೆ ಸಾಕಷ್ಟು ಚಿಂತನೆಗಳನ್ನೂ ಅವರ ಅಭಿವೃದ್ಧಿಗಾಗಿ ಕಾರ್ಯ ನಿರೂಪಣೆಗಳನ್ನೂ ಕೈಗೆತ್ತಿಕೊಂಡು ಬರುತ್ತಲೇ ಇವೆ. ಕರುಣಾಮಯ ಚಿಂತನೆಗೂ ಸಮಾನ ಬಾಳ್ವೆಯ ಕಲ್ಪನೆಗೂ ಹೆಸರಾದ ಭಾರತ ಸರಕಾರವು ತನ್ನ ಸಂವಿಧಾನದಲ್ಲೇ ಹತ್ತು ಹಲವು ಪ್ರಕರಣಗಳನ್ನು ಕಾನೂನಿನ ಚೌಕಟ್ಟಿನೊಳಗೆ ಅಳವಡಿಸಿ ಎಲ್ಲ ಜಾತಿ ಮತಗಳನ್ನು ಗೌರವಿಸಲು ಹಾಗೂ ರಕ್ಷಿಸಲು ನಿರೂಪಿಸಿದೆ. ರಾಜಾ ಪ್ರತ್ಯಕ್ಷ ದೇವತಾ ಎಂಬುದು, ಸರಕಾರ ಪ್ರತ್ಯಕ್ಷ ದೇವತಾ ಎಂದು ಅರ್ಥೈಸಿಕೊಳ್ಳುವುದು ಉತ್ಪ್ರೇಕ್ಷೆಯಲ್ಲ.

ಪ್ರಕೃತಿಯ ಏರುಪೇರುಗಳನ್ನು ಸಾಧ್ಯವಾದಷ್ಟು ಸರಿಪಡಿಸುವ ಪ್ರಯತ್ನ ಸರಕಾರ ಸದಾ ಮಾಡುತ್ತಲೇ ಬಂದಿದೆ. ಆದರೆ ವಿಶಾಲ ಭಾರತದ ನೂರಾರು ಕೋಟಿ ಜನ ಸಂಖ್ಯೆಯನ್ನು

---

ನೀಚ ಕೆಲಸ ಮಾಡುವ ಜಾಣರಿಗಿಂತ ಮೂರ್ಖರೆ ವಾಸಿ.

---

ಸಾಮಾಜಿಕವಾಗಿ ಒಂದು ಸ್ಥಿಮಿತದಲ್ಲಿರಿಸಲು ಪ್ರಯತ್ನಗಳು ಪರಿಣಾಮಕಾರಿಯಾಗುತ್ತಿಲ್ಲ. ಸಮಾಜವು ಸಾಕಷ್ಟು ಎಚ್ಚರಗೊಳ್ಳದಿರುವುದು, ದುಡಿಮೆ ನಿರೀಕ್ಷಿತ ಫಲ ತಾರದಿರುವುದು, ದುಶ್ಚಟಗಳು ಹಾಸು ಹೊಕ್ಕಿರುವುದು ವಿದ್ಯಾಹೀನತೆ ಮತ್ತು ದುಡಿಮೆಯಲ್ಲಿ ಆಸಕ್ತಿ ಇಲ್ಲದಿರುವುದು ಹಾಗೂ ಪ್ರಕೃತಿ ವಿಕೋಪ ಈ ದಿನಗಳಲ್ಲಿ ಆರ್ಥಿಕ ಹಾಗೂ ಸಾಮಾಜಿಕ ವ್ಯತ್ಯಾಸಗಳಿಗೆ ಕಾರಣಗಳಾಗಿದ್ದರೂ ಸರಕಾರವೂ ಸಾಮಾಜಿಕ ಸಮತೋಲನವನ್ನು ಯಶಸ್ವಿಗೊಳಿಸಲು ಪ್ರಯತ್ನ ಗಳನ್ನು ಕೈಬಿಡುವಂತಿಲ್ಲ. ಬಡತನ ರೇಖೆಯಿಂದ ಕೆಳಗಿರುವ ಸಮಾಜದವರಿಗೆ ಪಡಿತರ ಪದ್ಧತಿಯ ಮೂಲಕ ಗ್ರಾಮ ವಿಕಾಸದಡಿಯಲ್ಲಿ ಮನೆ, ಶಾಲೆ, ಕುಡಿಯುವ ನೀರು, ಸ್ವಯಂ ಉದ್ಯೋಗ ಅವಕಾಶ ಇತ್ಯಾದಿ ಕಾರ್ಯಕ್ರಮಗಳ ಪ್ರಕಾರ ಕೈಗೆ ಕೈಕೊಟ್ಟು ಸಹಕರಿಸುತ್ತಿದೆ. ಸಂಪೂರ್ಣ ಫಲಕಾರಿಯಾಗಿ ಮಾಡಲು ಶ್ರಮ ವಹಿಸುತ್ತಲೇ ಇದೆ. ಈ ಎಲ್ಲ ಕಾರ್ಯಕ್ರಮಗಳಲ್ಲದೆ ಜನರನ್ನು ವಿದ್ಯಾವಂತರನ್ನಾಗಿಸಲು ವಿದ್ಯಾರ್ಥಿ ವೇತನಗಳ ಮೂಲಕ ಪ್ರೋತ್ಸಾಹಿಸಿ ಮುಂದೆಗೆ ಸರಕಾರಿ ನೌಕರರಾಗಲು ಎಲ್ಲಾ ವಿಧದಲ್ಲೂ ಶ್ರಮಿಸುತ್ತಿದೆ. ಯಾವುದೇ ಸಮಾಜದಲ್ಲಾಗಲೀ, ಸಂಸಾರದಲ್ಲಾಗಲೀ, ಸಿರಿತನ ಕಾಲಿಡುವುದು ಸರಕಾರಿ ಸಂಬಳ ಪಡೆಯುವುದರ ಮೂಲಕ. ಇದು ಹೇಗೆ ಸಾಧ್ಯವೆಂಬುದರ ಬಗ್ಗೆ ಹೆಚ್ಚಿನವರು ತಲೆಕೆಡಿಸಿಕೊಳ್ಳುವ ಗೋಜಿಗೆ ಹೋದಂತೆ ಸಮುದಾಯದ ಅಜ್ಞಾನತೆಯಿಂದಾಗಿ ಕಂಡು ಬರುವುದಿಲ್ಲ. ಇದರ ಬಗ್ಗೆ ಕೆಳಗೆ ಹೇಳುವ ಅಂಕೆ ಅಂಶಗಳನ್ನು ಒಂದಿಷ್ಟು ಗಮನಿಸಿರಿ.

ಹಿಂದೂ ದೇಶದಲ್ಲಿ ಒಂದು ನೂರು ಕೋಟಿಗಿಂತಲೂ ಜನ ಸಂಖ್ಯೆ ಇದ್ದರೂ ಸರಕಾರದ ಹುದ್ದೆಯಲ್ಲಿರುವುದು ಬರೇ ಶೇಕಡಾ ಎರಡರಷ್ಟು ಮಾತ್ರ. ಆದರೆ ಈ ಶೇಕಡಾ ಎರಡರಷ್ಟಿರುವ ಸರಕಾರಿ ನೌಕರರು ದೇಶದ ಆದಾಯದ ಶೇ. 40 ರಷ್ಟು ವೇತನದ ರೂಪದಲ್ಲಿ ಪಡೆಯುತ್ತಾರೆ. ಎಂದರೆ ಸರಕಾರಿ ನೌಕರರ ವೇತನ ಸಾಮಾನ್ಯ ಭಾರತೀಯನ ಸರಾಸರಿ ಆದಾಯದ 20 ಪಟ್ಟು, ಈ ಕಾರಣಕ್ಕಾಗಿ ಸರಕಾರದ ನೌಕರರು ಶ್ರೀಮಂತರಾಗುವುದು. ಅದರಲ್ಲೂ ಗಂಡ ಹೆಂಡಿರಿಬ್ಬರೂ ಸರಕಾರದ ನೌಕರರಾದರೆ ಅಥವಾ ಮನೆಯ ಮಕ್ಕಳೆಲ್ಲ ನೌಕರರಾದರೆ ಶ್ರೀಮಂತಿಕೆಯ ಹೊನಲೇ ಹರಿಯುವುದು. ಇದನ್ನು ಅರ್ಥಪೂರ್ಣವಾಗಿ ವಿಶ್ಲೇಶಿಸಿದ ಸರಕಾರ, ಹರಿಜನರಿಗೆ, ಗಿರಿಜನರಿಗೆ, ಕಡು ಬಡವರಿಗೆ ಹಾಗೂ ಸಮಾನ್ಯ ಬಡವರಿಗೆಂದು ವರ್ಗೀಕರಿಸಿ ಸರಕಾರದ ಹುದ್ದೆಗಳಿಗಾಗಿ ಸ್ಥಾನಗಳನ್ನು ಕಾದಿರಿಸಿದೆ. ಇದೊಂದು ಸಂವಿಧಾನ ಬದ್ಧವಾದ ಕಾರ್ಯಕ್ರಮ. ಅಷ್ಟೇ ಅಲ್ಲ, ಕೇಂದ್ರ ಸರಕಾರವಾಗಲಿ, ರಾಜ್ಯ ಸರಕಾರವಾಗಲಿ, ಒಂದು ಪ್ರದೇಶದ ಹಿಂದುಳಿದ ಭಾಗದ ಜನತೆಗೆ ಅಭಿವೃದ್ಧಿಯ ಕನಸು ನನಸಾಗಿಸಲು ಅವರಿಗೆ ಹತ್ತು ಹಲವಾರು ಮಾರ್ಗಗಳಿಲ್ಲ. ಇರುವ ಏಕೈಕ ದಾರಿ ಎಂದರೆ ಅಂತಹ ಪ್ರದೇಶಗಳಲ್ಲಿ ವೃತ್ತಿಪರ ಮಹಾ ವಿದ್ಯಾಲಯಗಳನ್ನು ಸ್ಥಾಪಿಸಿ, ಅಲ್ಲಿಯ ಜನರನ್ನು ವಿದ್ಯಾವಂತರನ್ನಾಗಿಸಿ ಅವರನ್ನು ಸರಕಾರದ ಅಥವಾ ಖಾಸಗಿ ಕಂಪೆನಿಗಳಲ್ಲಿ ಉಚ್ಚ ಹುದ್ದೆಗಳನ್ನು ಪಡೆದು ಆರ್ಥಿಕ ಸಾಮರ್ಥ್ಯವನ್ನು ಹೆಚ್ಚಿಸುವುದೊಂದೆ. ವೃತ್ತಿಪರ ಕಾಲೇಜುಗಳಲ್ಲಿ ಕಾದಿರಿಸಿದ ಸೀಟುಗಳನ್ನು ಒದಗಿಸುವ ಮೂಲಕ ಕತ್ತಲು ಕವಿದೆಡೆ ಬೆಳಕು ಚೆಲ್ಲಿದಂತಹ ಸಾಮಾಜಿಕ ಮಾರ್ಪಾಟು ಸಾಧ್ಯವಾಗುತ್ತದೆ. ಇದನ್ನರಿತ ಮುಖಂಡರು ಹಲವಾರು ದಶಕಗಳಿಂದ ವೃತ್ತಿಪರ ಕಾಲೇಜುಗಳಿಗೂ ಕಾದಿರಿಸಿದ ಸೀಟುಗಳಿಗಾಗಿ ಯೋಜನೆಗಳನ್ನು ರೂಪಿಸುತ್ತಲೇ ಇರುತ್ತಾರೆ.

ಒಂದು ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ವಾಸಿಸುವ ಎಲ್ಲ ಜಾತಿ, ಉಪಜಾತಿ, ಪಂಗಡ, ಉಪ ಪಂಗಡಗಳನ್ನು ಸಾಮಾಜಿಕ ಹಾಗೂ ಆರ್ಥಿಕ ನೆಲೆಯ ಮೇಲೆ ಗುರುತಿಸಿ ಮುಖ್ಯವಾಗಿ I ಹರಿಜನರು, II ಗಿರಿಜನರು, III ಕಡು ಬಡವರು ಮತ್ತು IV ಸಾಮಾನ್ಯ ಬಡವರೆಂದು ವರ್ಗೀಕರಿಸಿರುತ್ತದೆ. ಅವು ಕೇಂದ್ರ ಸರ್ಕಾರದ ವರ್ಗೀಕರಣ. ಸರಕಾರದ ಹುದ್ದೆಗಳಿಗೆ ಒಂದು ನಿರ್ದಿಷ್ಟ ಪ್ರಮಾಣವನ್ನು ನಿಗದಿಗೊಳಿಸಿರುತ್ತಾರೆ. ಆದರೆ ನೂರಕ್ಕೆ ನೂರರಷ್ಟು ಹುದ್ದೆಗಳನ್ನು ಕಾದಿರಿಸಬಾರದೆಂದು ಭಾರತದ ಶ್ರೇಷ್ಠ ನ್ಯಾಯಾಲಯದ ಆದೇಶದ ಮೇಲೆಗೆ ಶೇ. 50 ರಷ್ಟನ್ನು ಮಾತ್ರ ಮೇಲೆ ಹೇಳಿದ ನಾಲ್ಕು ವರ್ಗಗಳಿಗೆ ಕಾದಿರಿಸಲಾಗುವುದು. ಉಳಿದ ಶೇ. 50 ನ್ನು ಸಾಮಾನ್ಯ ವರ್ಗವೆಂದು ಪರಿಗಣಿಸಿ ಅಂಕಗಳ ಅಥವಾ ಪರೀಕ್ಷೆಯ ಫಲಿತಾಂಶದ ಅರ್ಹತೆ ಪಡೆದವರಿಗಾಗಿ ಇರಿಸಿಕೊಂಡಿರುತ್ತದೆ. ಈ ವ್ಯವಸ್ಥೆಯಡಿಯಲ್ಲಿ ಅವರವರ ವರ್ಗದಡಿಯಲ್ಲಿ ಹುದ್ದೆಗಳಿಗೆ ಅರ್ಜಿ ಸಲ್ಲಿಸುವುದರೊಂದಿಗೆ ರ್‍ಯಾಂಕ್ ಪಡೆದವರಿಗೆ ಇರಿಸಿದ ಶೇ. 50ರಡಿಯಲ್ಲೂ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಸವಲತ್ತು ಒದಗಿಸಿದಂತಾಗಿದೆ.

ಈ ವರ್ಗೀಕರಣದ ಲಾಭ ಬರೇ ಸರಕಾರಿ ಉದ್ಯೋಗಕ್ಕೆ ಸೇರುವವರಿಗೆ ಮಾತ್ರವಲ್ಲ ಹಾಲಿ ಇರುವವರು ಬಡ್ತಿ ಹೊಂದುವ ಸಮಯದಲ್ಲೂ ಈ ಲಾಭವನ್ನು ಪಡೆಯಲಿರುವವರು, ಇದಲ್ಲದೆ ವೃತ್ತಿಪರ ಶಿಕ್ಷಣಕ್ಕೂ ಅನ್ವಯಿಸಿ ವಿದ್ಯಾರ್ಥಿವೇತನ, ಫೀಸಲ್ಲಿ ಮಾಫಿ, ವಿದ್ಯಾರ್ಥಿನಿಲಯಗಳಲ್ಲಿ ಸೇರ್ಪಡೆಗೊಳ್ಳಲು ಮತ್ತು ಇನ್ನೂ ಹತ್ತಾರು ಸಂದರ್ಭಗಳಲ್ಲಿ ಜೀವನದ ದಾರಿದೀಪವಾಗಿ ಮುಂದುವರಿಯುವಲ್ಲಿ ಅತಿದೊಡ್ಡ ಪಾತ್ರವಹಿಸುವುದು. ಈ ಕಾರಣಕ್ಕಾಗಿ ಅರಿವುಳ್ಳ ಹಿಂದುಳಿದವರು ತಮಗೆ ಸಲ್ಲಬೇಕಾದ ವರ್ಗಕ್ಕೆ ಸೇರಲು ಸದಾ ಶ್ರಮಿಸುತ್ತಿರುತ್ತವೆ. ದಯಾಮಯ ಸರಕಾರಗಳು ಇಷ್ಟೆಲ್ಲ ಕಾರ್ಯಕ್ರಮಗಳನ್ನು ನಿರೂಪಿಸುವುದರೊಂದಿಗೆ ಸಹಸ್ರಾರು ಜಾತಿ, ಉಪಜಾತಿಗಳನ್ನು ಹೊಂದಿದ ಈ ದೇಶದ ಬಡ ಜನತೆಗೆ ಅನ್ಯಾಯವಾಗಬಾರದೆಂಬ ದೃಷ್ಟಿಯಿಂದ ತಮ್ಮ ತಮ್ಮ ಜಾತಿಯವರ ಯಥಾ ಸ್ಥಿತಿಯನ್ನು ತೋಡಿಕೊಳ್ಳುವುದಕ್ಕೋಸ್ಕರ ಕೇಂದ್ರ ಹಿಂದುಳಿದ ಆಯೋಗವನ್ನು ಒಂದು ನಿರ್ದಿಷ್ಟ ಕಾಲಕ್ಕೂ ರಾಜ್ಯ ಸರಕಾರಗಳು ರಾಜ್ಯ ಹಿಂದುಳಿದ ಆಯೋಗವೆಂಬ ಖಾಯಂ ಸಂಸ್ಥೆಗಳನ್ನು ನಿರ್ಮಾಣ ಮಾಡಿ ನ್ಯಾಯ ಒದಗಿಸಲು ಪ್ರಯತ್ನಿಸುತ್ತಿದೆ. ಈ ಕಮಿಸನ್‌ಗಳು ರಾಜ್ಯಗಳಲ್ಲಿ ಮತ್ತು ರಾಜ್ಯದ ಜಿಲ್ಲಾ ಕೇಂದ್ರಗಳಲ್ಲಿ ಮೊಕ್ಕಾಂ ಹೂಡಿ ಬಡವರ ಆಹವಾಲುಗಳನ್ನು ಗಮನಿಸಿ ಅಗತ್ಯವಿದ್ದರೆ ಕ್ಷೇತ್ರಗಳಿಗೂ ಭೇಟಿಕೊಟ್ಟು ನಿಜಾಂಶವನ್ನು ತಿಳಿಯುವಲ್ಲಿ ಸತತ ಪ್ರಯತ್ನ ನಡೆಸುತ್ತಲೇ ಇವೆ. ಇಂತಹ ಸಂದರ್ಭಗಳಲ್ಲಿ ನಾವೂ ಎಚ್ಚರ ಇರಬೇಕಾದುದು ಅತಿ ಮುಖ್ಯ.

ಇಂತಹ ವಿವರ ಮಾಹಿತಿಯನ್ನು ಸರಕಾರವು ಎಲ್ಲರಿಗೂ ತಿಳುವಳಿಕೆ ಇತ್ತರೂ ಕೆಲವೊಂದು ಕೋಮಿನವರು ಸಿಂಹದ ಚರ್ಮವನ್ನು ತೊಟ್ಟುಕೊಂಡು ಕತ್ತೆಗಳಂತೆ ತಾವು ಜನಿಸಿದ ನಿಜ ಜಾತಿ ಹೇಳಿಕೊಳ್ಳದೆ ತಾನು ಕೀಳು ಜಾತಿಯವನೆಂದು

ಹೇಳಿಕೊಳ್ಳುವುದರಿಂದ ಸಮಾಜದಲ್ಲಿ ಮೇಲ್ಜಾತಿಯವರಿಂದ ಗೌರವಿಸಲ್ಪಡಲಾರೆವೆಂಬ ಅಹಂನಿಂದಾಗಿ ತಾನು ಇಂತಹ ಕೋಮಿನವರುಅಂತಹ ಜಾತಿಯವನು ಎಂದು ಸಮಾಜದಲ್ಲಿ ತೋರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ದೂರದೂರದಲ್ಲಿ ಈ ನಟನೆ ಸಾಧ್ಯವಾಗುತ್ತದೆ. ಒಮ್ಮೊಮ್ಮೆ ತಾತ್ಕಾಲಿಕ ಫಲವೂ ದೊರೆಯುತ್ತದೆ. ಆದರೆ ಇದು ಸರಿಯೇ? ಧರ್ಮದಡಿಯಲ್ಲೂ, ಕಾನೂನಿನಡಿಯಲ್ಲೂ ಇದು ತಪ್ಪಾಗುತ್ತದೆ. ತನ್ನ ಜಾತಿಯನ್ನು ಬಚ್ಚಿಟ್ಟು ಇನ್ನೊಂದು ಜಾತಿಯವನೆಂದು ಹೇಳಿಕೊಳ್ಳುವುದರಿಂದ ತನ್ನ ಹೆತ್ತವರನ್ನೇ ಹೆತ್ತವರೆಂದು ಗುರುತಿಸಿಕೊಳ್ಳಲು ವಿಫಲನಾಗುತ್ತಾನೆ. ಅರ್ಥಾತ್ ತನ್ನ ನಿಜ ತಂದೆಯನ್ನು ಕೈಬಿಟ್ಟು ಇನ್ನೊಂದು ಕೋಮಿನವನಿಗೆ ಜನಿಸಿದವನೆಂಬ ಕಲ್ಪನೆ ನಿರ್ಮಾಣವಾಗಿ ಇದೊಂದು ಹಾಸ್ಯಾಸ್ಪದದ ಹಾಗೂ ವಿಷಾದನೀಯ ವಿಷಯವಾಗುತ್ತದೆ. ಇದು ಧರ್ಮದ ಪ್ರಶ್ನೆಯಾದರೆ ಕಾನೂನಿನ ಚೌಕಟ್ಟಿನಲ್ಲಿ ಅವನು ಅವನ ನಿಜ ವ್ಯಕ್ತಿತ್ವವನ್ನು ಮರೆ ಮಾಡಿ ಇನ್ನೊಬ್ಬ ವ್ಯಕ್ತಿ ಎಂದು ವಂಚಿಸುವವನ ಯಾದಿಗೆ ಸೇರುತ್ತಾನೆ. ಇಂತಹವರಿಗೆ ಐಪಿಸಿಯ ಸೆಕ್ಷನ್ 420ರಡಿಯಲ್ಲಿ ಶಿಕ್ಷಿಸಬಹುದಾಗಿದೆ. ಆದರೆ ವಿಶಾಲ ಭಾರತದಲ್ಲಿ ಇಂತಹ ಅಪರಾಧಗಳನ್ನು ಗುರುತಿಸಿ ಅವರನ್ನು ಶಿಕ್ಷಿಸುವಷ್ಟು ಸರಕಾರ ಮುಂದಾಗುವುದು ದೂರಿನ ಆಧಾರಗಳನ್ನನುಸರಿಸಿಯಾಗಿರುತ್ತದೆ. ಅದೆಷ್ಟು ಸಹಸ್ರ ಮಂದಿ ಪರ ಊರಿನಿಂದ ಬಂದು ಜಾತಿಯನ್ನು ಅಡಗಿಸಿ ಮೇಲ್ಜಾತಿಯ ಕನ್ನೆಯರನ್ನು ಮದುವೆಯಾಗಲಿಲ್ಲ? ವರನಿಗಾಗಿ ಕಾದು ಬೆಂಡಾದ ಹೆತ್ತವರಿಗೆ ಯಾರೋ ಒಬ್ಬ ವರ ಬಂದನಲ್ಲಾ ಎಂದು ನಿಟ್ಟುಸಿರು ಬಿಡುವ ಆ ಸಮಯದಲ್ಲಿ ಗಂಡಿನ ಜಾತಿ, ಮತ ಹಿನ್ನಲೆಯತ್ತ ತಲೆ ಓಡಿಸುವುದಿಲ್ಲ. ಇದು ಒಂದು ಸಾಮಾಜಿಕ ಪಿಡುಗೆನ್ನಲೂಬಹುದು.

ಜಾತಿ ಹುಟ್ಟಿನಿಂದ ಬರುವಂತಹದ್ದು. ಅದನ್ನು ಬದಲಾಯಿಸಲು ಆಗುವುದೇ ಇಲ್ಲ. ಮತ ಹಾಗಲ್ಲ ಅದು ಆಚಾರದಿಂದ ಬರುವಂತಹ ವಿಷಯ. ಹುಟ್ಟಿನಿಂದ ತಂದೆಯ ಮತ್ತು ತಾಯಿಯ ಜಾತಿಯೇ ಮಗುವಿಗೂ ಅದೇ ಜಾತಿ ಎಂದು ಗುರುತಿಸಲಾಗುವುದು. ತಂದೆ ತಾಯಿಯವರು ಬೇರೆ ಬೇರೆ ಜಾತಿಯವರಾದಾಗ ಮಗುವಿಗೆ ಪಿತೃ ಪ್ರಧಾನ ಜಾತಿಯಲ್ಲಿ ತಂದೆಯ ಜಾತಿ ಎಂದೇ ಗುರುತಿಸಲಾಗುವುದು. ಮಾತೃ ಪ್ರಧಾನ ಜಾತಿಗಳಲ್ಲಿ ತಾಯಿಯ ಜಾತಿಯನ್ನೇ ಮಗುವಿಗೆ ಗುರುತಿಸಲಾಗುವುದು. ಇತ್ತೀಚೆಗಿನ ದಿನಗಳಲ್ಲಿ ಒಬ್ಬ ವ್ಯಕ್ತಿಯ ಜಾತಿಗೂ ಪ್ರಾತಿನಿಧ್ಯ ಇರುವ ಸಂದರ್ಭಗಳು ಬಂದೇ ಬರುತ್ತವೆ. ಒಂದು ಜಾತಿಯಲ್ಲಿ ಹುಟ್ಟಿ ಇನ್ನೊಂದು ಜಾತಿಯನ್ನು ಹೇಳಿ ಉದ್ಯೋಗ ಗಿಟ್ಟಿಸಿಕೊಂಡವರು ಮತ್ತು ವೃತ್ತಿಪರ ವಿದ್ಯೆ ಪಡೆಯುವಲ್ಲಿ ತಮಗೆ ಸಲ್ಲದಿರುವಂತಹ ಸವಲತ್ತುಗಳನ್ನು ತಮ್ಮದಾಗಿಸಿ ವಂಚನೆಗಳು ಬೆಳಕಿಗೆ ಬಂದ ಹಿನ್ನಲೆಯಲ್ಲಿ ಇತ್ತೀಚೆಗಿನ ದಿನಗಳಲ್ಲಿ ಮಗು ಜನಿಸಿದಾಗ ತಂದೆಯ ಹೆಸರು ಮಾತ್ರವಲ್ಲ ತಾಯಿಯ ಹೆಸರನ್ನು ದಾಖಲಿಸುವ ಕ್ರಮವನ್ನು ಅಳವಡಿಸಲಾಗಿದೆ. ಮತ ಸಂಗ್ರಹಿಸಲು ಹೊರಟ ರಾಜಕಾರಣಿಗಳು ಜಾತಿಯ ಆಧಾರದ ಮೇಲೆ ತಮ್ಮ ಸಂಬಂಧವನ್ನು ಗುರುತಿಸಿಕೊಳ್ಳಲು ಹೊರಟವರು ತಮ್ಮ ಜಾತಿಗೆ ಸಮಾನವಾದ ಜಾತಿ ಎಂದು ತಮ್ಮತ್ತ ಬರಲು ಹೊಂಚು ಹಾಕುತ್ತಾರೆ. ಇದರಿಂದಾಗಿ ತನ್ನ ಹೆಸರಿಗೆ ಒಪ್ಪುವ ಸಮೀಪದ ಹೆಸರಿನ ಜಾತಿಯವನನ್ನು ತಮ್ಮವನೆಂದು ಬೆನ್ನು ತಟ್ಟಲು ಮುಂದಾಗುತ್ತಾನೆ. ಆದರೆ ಇದೆಲ್ಲ ರಾಜಕೀಯ ಕಸರತ್ತುಗಳಲ್ಲದೆ ಬೇರೇನೂ ಅಲ್ಲ. ಅವನು ನಿಮ್ಮವನಾಗುವುದಿಲ್ಲ. ನೀವು ಅವನ ವಂಶದವರಾಗುವುದಿಲ್ಲ.

"ಹತ್ತು ಕುಟುಂಬ, ಹದಿನೆಂಟು ಗೋತ್ರ" ಕ್ಕೆ ಸೇರಿದ ಗೌಡರನ್ನು ದಕ್ಷಿಣ ಕನ್ನಡ, ಕೊಡಗಿನ ಮತ್ತು ಮೈಸೂರಿನ ಗೆಜ್ಜೇಟಿಯರ್‌ಗಳಲ್ಲಿ ಪ್ರತ್ಯೇಕವಾಗಿ ಗುರುತಿಸಲಾಗಿದೆ. ಇಲ್ಲಿ "ಹತ್ತು ಕುಟುಂಬ ಹದಿನೆಂಟು ಗೋತ್ರ" ಎಂಬುದರ ಮೂಲಾರ್ಥವನ್ನು ಹುಡುಕುವುದಕ್ಕಿಂತಲೂ ಸಮಾಜದ ಜನರನ್ನು ಗುರುತಿಸುವಾಗ ಈ ಚೌಕಟ್ಟನ್ನು ಗುರುತಿಸುವ ಅಗತ್ಯತೆಗಾಗಿ ಬಳಸಿಕೊಂಡಿದ್ದಾರೆ. ಇದು ಬರೇ ಊಹಾ ಪೋಹದ ಚೌಕಟ್ಟಲ್ಲ. ಸಮಾಜದಲ್ಲಿ ಹಾಸುಹೊಕ್ಕ ಜಾತಿಯ ನಿರ್ಣಾಯಕ ಚೌಕಟ್ಟು, ಅರೆಭಾಷೆ ಮತ್ತು ತುಳು ಮಾತೃ ಭಾಷೆಯಾಗಿರುವ ಗೌಡರ ಸಮಾಜದ ಮದುವೆಯಂತಹ ಸಮಾರಂಭಗಳಲ್ಲಿ ಸಮಾಜ ಬಾಂಧವರನ್ನು ಉದ್ದೇಶಿಸಿ ಮಾತನಾಡುವಾಗ "ಹತ್ತು ಕುಟುಂಬ ಹದಿನೆಂಟು ಗೋತ್ರದ ಸಮಸ್ತ ಸಮಾಜ ಬಾಂಧವರಲ್ಲಿ ಕೇಳಿ ವರನಿಂದ ಇಂತಹ ವಧುವಿಗೆ ಧಾರೆ ಎರೆಯುತ್ತೇವೆ" ಎಂಬುದು ಅರ್ಥಪೂರ್ಣವಾದ ಸಾಮಾಜಿಕ ಗುರುತು ಇದಾಗಿದೆ. ಈ ಪದ್ಧತಿಯನ್ನು ನಮ್ಮ ಸಮಾಜದಲ್ಲಿ ಗುರುತಿಸಿದ ಮಾನದಂಡವಾಗಿ ಬಳಸಿಕೊಂಡು ಬಂದಿರುವವರು. ಗೌಡರೆನಿಸಿಕೊಳ್ಳುವವರು. ಗೌಡರೆಂದು ಗುರುತಿಸಿಕೊಂಡವರು ಹಲವಾರು ಜಾತಿಗೆ ಉಪಜಾತಿಗೆ ಸೇರಿರಬಹುದು. ಅವರ ಸಾಮಾಜಿಕ ಹಿನ್ನೆಲೆ ಬೇರೆ ಬೇರೆಯೇ ಆಗಿರುತ್ತದೆ. ಆದರೆ "ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ " ಸೇರಿದ ಗೌಡರ ಸಾಮಾಜಿಕ ಹಿನ್ನಲೆ ಒಂದೇ ಆಗಿದೆ. ಇವರು ಮೂಲತಃ ಶೃಂಗೇರಿ ಮಠಕ್ಕೆ ಸೇರಿದ ಶಿಷ್ಯವರ್ಗದವರು. ಇವರ ಕುಲ ದೇವರು "ಏಳೂರು ದೇವರು" ಎಂದರೆ ಏಳು ಬೆಟ್ಟಗಳಲ್ಲಿ ವಾಸಿಸುವ ತಿರುಪತಿ ವೆಂಕಟ್ರಮಣ ದೇವರು. ಇವುಗಳೆಲ್ಲವೂ ಈ ಗೌಡರನ್ನು ಗುರುತಿಸುವ ಸಂಕೇತಗಳು ಎಂಬುದನ್ನು ಗಮನಿಸಬೇಕಾದುದು ಅತಿ ಮುಖ್ಯ.

- ಎಂ.ಆರ್. ಬಾಲಕೃಷ್ಣ, ಸುಳ್ಯ.

9 ನೇ ಪುಟದಿಂದ

ಈ ಪ್ರಕ್ರಿಯೆ ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿತು. ಈ ಪ್ರಶ್ನೆ ಈಗಲೂ ಪ್ರಸ್ತುತ ಎಂಬ ಮಾತನ್ನು ಪ್ರತ್ಯೇಕವಾಗಿ ಹೇಳುವುದು ಅನಗತ್ಯ.

ಹತ್ತೊಂಬತ್ತನೇ ಶತಮಾನದ ಮಹಿಮಾಧರ್ಮ ಮತ್ತು ಸತ್ನಾಮ್ ಪಂಥಗಳೆರಡೂ ಕೆಳಜಾತಿಗಳ 'ಸಕೀಲ' (ಆರ್ಗಾನಿಕ್) ಚಳುವಳಿಗಳು. ಪರಮ ಪೂಜ್ಯ ಸ್ವಾಮೀಜಿಗಳು ಒಕ್ಕಲಿಗರ ಏಕಮಾತ್ರ ಗುರುಗಳಾಗಿ ಸತ್ನಾಮ್ ಪಂಥ'ದ ಗುರು ಘಾಸೀದಾಸರಿಗೆ ಇವರನ್ನು ಹೋಲಿಸಬಹುದೇ?ಡಾ. ಅಂಬೇಡ್ಕರ್ ಪ್ರಕಾರ " ಹಿಂದೂ ಧರ್ಮಕ್ಕೆ ವಿಶಾಲವಾದ ವಾತಾಪಿ ಗರ್ಭವಿದೆ. ಅದು ಎಲ್ಲವನ್ನೂ ಅಂತಿಮವಾಗಿ ನುಂಗಿ ನೀರು ಕುಡಿಯುತ್ತದೆ. "ಸ್ವಾಮೀಜಿಗಳ ಮುಂದಾಳತ್ವದಲ್ಲಿ ಒಕ್ಕಲಿಗರು ಸಕಾಲಕ್ಕೆ ಸಿದ್ಧರಾಗಿದ್ದಾರೆಯೇ? ' ಸಕೀಲ' ಅಂದರೆ ಸಾಮಾಜಿಕ ಅವಮಾನ ಮತ್ತು ಶೋಷಣೆಗಳಲ್ಲಿ ಕುಗ್ಗಿ ಹೋಗಿರುವ ಜನರಿಂದಲೇ ಹುಟ್ಟುವ ಹೋರಾಟಗಳು.

- ಎನ್. ಎಸ್. ದೇವಿಪ್ರಸಾದ್, ಸಂಪಾಜೆ.

# ಕೈಯ ಎಗ್ಸಿಮಾ

ಎಗ್ಸಿಮ ಒಂದೆರಡು ವಾರಗಳಲ್ಲಿ ಹೊರಗಿನಿಂದ ಗುಣವಾದಂತೆ ಕಂಡರೂ ಒಳಗಿನಿಂದ ಗುಣವಾಗಿ ಚರ್ಮದ ಆರೋಗ್ಯ ಮೊದಲಿನಂತಾಗಲು ಎರಡೂವರೆ ತಿಂಗಳು ಬೇಕಾಗಬಹುದು. ಕೈಯ ಎಗ್ಸಿಮ ಬೇಗನೇ ಗುಣವಾಗಲು ಕೆಳಗೆ ವಿವರಿಸಿದ ಮುಂಜಾಗ್ರತೆಗಳನ್ನು ವಹಿಸಿರಿ.

ಕೈ ತೊಳೆಯುವಾಗ ಈ ಮೊದಲು ಹೇಳಿದಂತೆ ಜಾಗ್ರತೆ ವಹಿಸಬೇಕು. ಡಿಟರ್ಜೆಂಟ್ ಮತ್ತು ಇತರ ಸ್ವಚ್ಛಗೊಳಿಸಲು ಉಪಯೋಗಿಸುವ ರಾಸಾಯನಿಕಗಳನ್ನು ಬಳಸಬೇಡಿ. ಬಳಸಲೇಬೇಕೆಂದರೆ ತಯಾರಕರ ನಿರ್ದೇಶನಗಳನ್ನು ಪಾಲಿಸಿ, ಇಂತಹ ವಸ್ತುಗಳನ್ನಿರಿಸಿದ ಪೆಟ್ಟಿಗೆಗಳನ್ನು ಹೊರಗೆ ಚೆನ್ನಾಗಿ ಒರೆಸಿ ಅಲರ್ಜೆನ್‌ಗಳಿಲ್ಲದಂತೆ ಜಾಗ್ರತೆ ವಹಿಸಿ, ಇಲ್ಲವಾದರೆ ನೀವು ಅದನ್ನು ಎತ್ತಿ ಕಪಾಟಿನಲ್ಲಿಟ್ಟಾಗ ನಿಮ್ಮ ಕೈಗ್ಯೆ ರಾಸಾಯನಿಕಗಳು ತಗಲುತ್ತವೆ.

ಶಾಂಪೂವನ್ನು ಕೈಯಲ್ಲಿ ಹಾಕಿ ಬಳಸಲೇಬಾರದು. ಬಳಸಬೇಕಿದ್ದರೆ ಕೈ ಚೀಲ ಹಾಕಿಕೊಳ್ಳಬೇಕು ಅಥವಾ ನಿಮ್ಮ ಮತ್ತು ನಿಮ್ಮ ಮಕ್ಕಳ ಕೂದಲನ್ನು ಬೇರೆಯವರ ಹತ್ತಿರ ಸಾಂಪೂ ಬಳಸಿ ಸ್ವಚ್ಛಗೊಳಿಸಲು ಹೇಳಿ. ಪೆಟ್ರೋಲ್, ಡೀಸಲ್, ಗ್ರೀಸ್, ಸ್ಪಿರಿಟ್ ಹಾಗೂ ಬ್ರಷ್, ಟಿವಿ ಮತ್ತು ಕಕ್ಕಸು ಸ್ವಚ್ಛಗೊಳಿಸುವ ರಾಸಾಯನಿಕ ದ್ರಾವಕಗಳಿಂದ ದೂರವಿರಿ.

ಶೂ ಪಾಲಿಶ್, ಲೋಹ ಪಾಲಿಶ್, ಸ್ಪ್ರೇ ಮುಂತಾದವುಗಳಿಂದಲೂ ಹೊಳಪು ಬರಿಸುವ ಸಾಧನಗಳಿಂದಲೂ ದೂರವಿರಿ. ನಿಂಬೆ, ಕಿತ್ತಳೆ, ಹುಳಿ, ಉಪ್ಪು, ಮೆಣಸು, ಮಸಾಲೆ ಪದಾರ್ಥಗಳನ್ನು ಬರಿಗೈಯಿಂದ ಮುಟ್ಟಬೇಡಿ. ತರಕಾರಿ ತುಂಡು ಮಾಡುವಾಗ, ಮೀನು ಸ್ವಚ್ಛಗೊಳಿಸುವಾಗ ಕೈಚೀಲಗಳನ್ನು ಬಳಸಿ.

ಕೂದಲಿಗೆ ಕ್ರೀಂ , ಬಣ್ಣ ಇತ್ಯಾದಿಗಳನ್ನು ಬರಿಗೈಯಲ್ಲಿ ಹಚ್ಚಬೇಡಿ. ಚಳಿಗಾಲದಲ್ಲಿ ಕೈ ಚೀಲಗಳನ್ನು ಹಾಕಿಕೊಂಡಿರಿ. ಅಡುಗೆ ಕೆಲಸ ಅಥವಾ ಕೈ ಒದ್ದೆಯಾಗುವ ಕೆಲಸಗಳನ್ನು ಮಾಡುವಾಗ ಉಂಗುರವನ್ನು ಬೆರಳಿನಿಂದ ತೆಗೆಯಿರಿ. ಉಂಗುರವಿರುವಾಗ ಸಾಬೂನಿನಲ್ಲಿ ಕೈ ತೊಳೆಯಲೇ ಬಾರದು. ಏಕೆಂದರೆ ಉಂಗುರದ ಸಂದಿನಲ್ಲಿ ಸಾಬೂನು ಮತ್ತಿತರ ಅಲರ್ಜಿಕಾರಕಗಳು ಸೇರಿಕೊಳ್ಳುತ್ತವೆ.

ಕೈ ತೊಳೆಯುವಾಗ ಸಾಧ್ಯವಾದಷ್ಟು ಹರಿಯುವ ನೀರನ್ನು ಬಳಸಿ (ಅಂದರೆ ನಲ್ಲಿನೀರು ಅಥವಾ ಒಂದು ಕೈಯಿಂದ ಇನ್ನೊಂದು ಕೈಗ್ಯೆ ನೀರು ಎರೆದುಕೊಳ್ಳುವುದು.) ಕೈ ಚೀಲವನ್ನು 30 ನಿಮಿಷಕ್ಕಿಂತ ಹೆಚ್ಚು ಹಾಕಿಕೊಂಡಿರಬೇಡಿ. ನೀರು ಕೈಚೀಲದೊಳಗೆ ಸೇರಿಕೊಂಡರೆ ತಕ್ಷಣ ಕೈ ಚೀಲವನ್ನು ಬದಲಾಯಿಸಿ. ಕೈ ಚೀಲದೊಳಗೆ ಕೈ ತುರುಕಿದಾಗ ಟಾಲ್ಕಂ ಪೌಡರನ್ನು ಬಳಸಿದರೆ ಕೈ ಚೀಲ ಹಾಕಿಕೊಳ್ಳುವುದು ಸುಲಭ.

***ಸೋರಿಯಾಸಿಸ್***

ಬಿಳಿ ತೊನ್ನು ಮತ್ತು ಸೋರಿಯಸಿಸ್ ಎಂಬುವುವು ಜನರಲ್ಲಿ ಆತಂಕ ಮತ್ತು ಭಯವನ್ನು ಮೂಡಿಸುವ ಆದರೆ ಪುವ (PUVA)ಚಿಕಿತ್ಸೆಯಿಂದ ನಿಯಂತ್ರಣದಲ್ಲಿ ಇಟ್ಟುಕೊಳ್ಳಬಹುದಾದ ಸಾಮಾನ್ಯ ಚರ್ಮರೋಗಗಳು. ಈ ರೋಗಗಳಿಂದ ನೊಂದ ಅನೇಕರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಈ ಟಿಪ್ಪಣಿ ಬರೆದಿದ್ದೇನೆ.

ಈಗ ಈ ಎರಡು ರೋಗ ಲಕ್ಷಣಗಳ ಬಗೆಗೆ ಸ್ವಲ್ಪ ತಿಳಿಯೋಣ. ಸೋರಿಯಾಸೀಸ್ ಎಂಬುದು ಚರ್ಮದ ಒಳಗಿನಿಂದ ಬರುವಂತಹ ರೋಗ. ಈ ಕಾಯಿಲೆ ಚರ್ಮದ ಬೇರೆ ಬೇರೆ ಜಾಗಗಳಲ್ಲಿ ಕಾಣಿಸಬಹುದು.

ಕೈ ಅಥವಾ ಕಾಲಿನ ಉಗುರುಗಳ ಮೇಲ್ಮೈಯಲ್ಲಿ ಸಣ್ಣ ಸಣ್ಣ ತೂತುಗಳಂತೆ ಇರಬಹುದು. ತಲೆಯ ಒಂದಷ್ಟು ಜಾಗದಲ್ಲಿ ದಪ್ಪವಾದ ಹೊಟ್ಟುಗಳಾಗಿ ಇರಬಹುದು. ದೇಹದಲ್ಲಿ ಕೆಂಪಾದ ಗುಳ್ಳೆಗಳ ರೂಪದಲ್ಲಿ ಇದ್ದು ಸಿಪ್ಪೆ ಹೋಗುತ್ತಿರಬಹುದು. ದೇಹದಲ್ಲಿ ಕೀವಿನ ಬೊಕ್ಕೆಗಳಾಗಿ ಬರಬಹುದು. ಅಂಗೈ ಮತ್ತು ಅಂಗಾಲುಗಳ ಬೆರಳುಗಳಲ್ಲಿ ನಿರಂತರವಾಗಿ ಯಾವ ಚಿಕಿತ್ಸೆಗೂ ಮಣಿಯದ, ತಿಂಗಳುಗಟ್ಟಲೆ / ವರ್ಷಗಟ್ಟಲೆ ಬರುವ ಕೀವಿನಿಂದ ತುಂಬಿದ ಗುಳ್ಳೆಗಳಾಗಿ ಅಥವಾ ಚರ್ಮದಪ್ಪವಾಗಿ ಸಿಪ್ಪೆ ಹೋಗುತ್ತಿರಬಹುದು. ಎಲುಬು, ಸಂದುನೋವು, ಊತ ಇರಬಹುದು.

ಇವುಗಳೆಲ್ಲವೂ ತುರಿಕೆಯಿಂದ ಕೂಡಿರಬಹುದು. ಈ ಎಲ್ಲಾ ಲಕ್ಷಣಗಳೂ ಒಬ್ಬ ರೋಗಿಯಲ್ಲಿಯೇ ಕಾಣಬಹುದು ಅಥವಾ ಯಾವುದಾದರೂ ಒಂದೊಂದು ಲಕ್ಷಣ ಮಾತ್ರವೇ ಕಂಡುಬರಬಹುದು. ಈ ರೋಗದ ಒಂದು ಚಿಹ್ನೆ ಒಂದು ಜಾಗದಲ್ಲಿ ಗೋಚರಿಸಿದೊಡನೆಯೇ, ಸೋರಿಯಾಸಿಸ್ ದೇಹವಿಡೀ ವ್ಯಾಪಿಸುವುದೆಂದು ಹೇಳಲು ಸಾಧ್ಯವಿಲ್ಲ. ಅದೇ ರೀತಿ ಇದು ಇದ್ದಂತೆಯೇ ಇರುವುದೇ, ತಾನಾಗಿಯೇ ಗುಣ ಹೊಂದುವುದೇ, ಗುಣವಾಗಿ ಪುನಃ ಕಾಣಿಸಬಹುದೇ ಎಂದು ಹೇಳಲೂ ಸಾಧ್ಯವಿಲ್ಲ.

ಸ್ವಲ್ಪ ಜಾಗದಲ್ಲಿ ಇದ್ದಾಗ ಸ್ಟೀರಾಯ್ಡ್ ಕ್ರೀಮುಗಳನ್ನು ಹಚ್ಚುತ್ತಾ ಇರಬಹುದು. ಗುಣವಾಗಲು ಬಹಳಷ್ಟು ಸಮಯವಾಗಬಹುದು. ಆದರೆ ದೇಹದ ಅನೇಕ ಭಾಗಗಳಲ್ಲಿ

15 ನೇ ಪುಟಕ್ಕೆ

*ಪುಟಾಣಿ ವಿಭಾಗ*

# ಗುರು ಎಲ್ಲಾವುಕು ಬೇಕ್

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ತ ದಾಸಂಗ ಈ ಹಿಂದೆನೆ ಹಾಡ್ಯೋಳೊ. ಗುರುತ್ತೇಳಿರೆ ಬೃಹತ್, ದೊಡ್ಡದ್‌ತ ಅರ್ಥ ಬಂದದೆ. ನಿಮಿಗೆ ಗುರುಗ್ರಹ ಗೊತ್ತುಟ್ಟಲಾ? ಅದ್ ಎಲ್ಲಾ ಗ್ರಹಗಳಿಗಿಂತ ದೊಡ್ಡದ್. ಅದಿಕ್ಕೆ ಗುರುತ ಹೇಳಿವೆ. ಮನ್‌ಷ್ಯನಲ್ಲಿ ಸಹ ಎಲ್ಲ ವಿಷಯನ ತಿಳ್ದಂವ, ಬೋಧಿಸುವ ಮತ್ತೆ ಮಾರ್ಗದರ್ಶನ ಮಾಡುವ ಸಾಮರ್ಥ್ಯ ಇರಂವ ಉಳಿದಂವಗಿಂತ ಶ್ರೇಷ್ಠಗಡ. ಹಂಗಾಗಿಯೇ ಆ ವ್ಯಕ್ತಿ ಗುರು ಆದೆ. ಪಾಠ ಮಾಡಂವ ಎಂದರೆ ಶಿಕ್ಷಣ ಕೊಡಂವತ. ಅಂವನ ಸಾ ಗುರುತಾ ಕರ್‍ದವೆ.

ನಿಮಿಗೆ ಗೊತ್ತಿರಕು, ಪಂಡೆಲ್ಲಾ ಯಿ ಗುರುಗೆ ಬಾಳ ಗೌರವ ಇತ್ತ್. ಗುರು ಬಾತ್‌ತ್ತೇಳ್ದರೆ, ರಾಜ ಗದ್ದುಗೆಯಿಂದ ರಾಜಸ ಎದ್ದ್ ನಿಲ್ಲ್‌ತ್ತಿತ್ತ್. ಎಷ್ಟೇ ಶ್ರೀಮಂತ ಆದರ್ ಗುರು ಕುಲಲಿ ಎಲ್ಲರೊಟ್ಟಿಗೆ ಒಂದಾಗಿ ಹತ್ತೊ ಹನ್ನೆರಡ್ ವರ್ಷ ಕಾಲ ವಿದ್ಯಾಭ್ಯಾಸ ಒಟ್ಟಿಗೆ ಮಾಡಕ್ಕಾಗಿತ್. ಅಲ್ಲಿ ವಿದ್ಯೆ ಕಲ್ತ್ ಬಂದಂವ ಜೀವನ ಸ್ವತಂತ್ರ ಆಗಿ ನಿರ್ವಹಿಸ್ವ ಆತ್ಮ ವಿಶ್ವಾಸ ಹೊಂದಿರ್‌ತ್ತಿತ್ತ್. ಆಗೆಲ್ಲಾ ಮುಂದೆ ಗುರಿ ಇರ್‌ತ್ತ್. ಅದರ ಹಿಂದೆನೆ ಗುರು ಇರ್ತಿತ್. ಆಗ ಅಲ್ಲಿ ನಮಿಗೆ ಜೀವನ ನಿರ್ವಹಣೆ ಪಾಠನ ಹೇಳ್‌ದ್ದೊ.

ಈಗ ನಮಿಗೆ ಸಿಕ್ಕುದು, ಆಂಗ್ಲ ವಿಧ್ಯಾಧಾರಣೆ. ಸುಮಾರ್ 200 ವರ್ಷಗಳ ಹಿಂದೆ ಮೆಕಾಲೆ ಎಂಬ ಬ್ರಿಟಿಷ್ ಅಧಿಕಾರಿ ಭಾರತಲಿ ಈಗಿರುವ ಶಿಕ್ಷಣ ಪದ್ಧತಿನ ಸುಧಾರಣೆ ನೆಪಲಿ ಬಂಗಾಳ ದೇಶಲಿ ಪ್ರಯೋಗ ಮಾಡ್. ಅಂದರೆ ಭಾರತೀಯರ ಆತ್ಮ ವಿಶ್ವಾಸನ ಕೆದಕ್ಕುದೆ ಅಂವನ ಉದ್ದೇಶ ಆಗಿತ್. ಅಂವ ಅಂವನ ಅಪ್ಪಂಗೆ ಬರ್‍ದ ಕಾಗದಲಿ ಹಿಂಗೆ ಬರ್‍ದಿತ್‌ಗಡ. ಭಾರತಲಿ ನಾನೀಗ ಸುರು ಮಾಡುವ ಹೊಸ ಪದ್ಧತಿ ಇನ್ನ್ ಹತ್ ವರ್ಷಲಿ ಅಲ್ಲಿ ಭಾರತೀಯರ್ ಅಲ್ಲದ ಇತ್ತ ಪಾಶ್ಚಾತ್ಯರ್ ಅಲ್ಲದ ಅರೆಬೆರೆ ವರ್ಗ ಸೃಷ್ಟಿಯಾದೆತ. ಅಂತವು ಸದಾ ನಮ್ಮ ಅಡಿ ಆಳಾಗಿದ್ದವೆತ.

ಆ ಸಮಯಲಿ ಭಾರತಲಿ 30,000 ಗುರು ಕುಲಗ ಇದ್ದೊಗಡ. ಕಾಲ ಕ್ರಮೇಣ ಅವೆಲ್ಲ ನಿರ್ನಾಮ ಆಗಿ ಹೋತು. ಮೆಕಾಲೆ ಪದ್ಧತಿ ಬಳಕೆಗೆ ಬಾತ್. ಸುರು ಸುರುಲಿ ಗುರು ಕುದ್ದ್‌ಕಂಡ್ ಪಾಠ ಹೇಳ್ತಿದ್ದೊ. ಶಿಷ್ಯರ್ ನಿಂತ್ ಪಾಠ ಕೇಳ್ತಿದ್ದೊ. ಕ್ರಮೇಣ ಗುರು ಕುದ್ದ್ ಕಂಡ್ ಕಲ್‌ಸ್ತಿತ್. ಶಿಷ್ಯಂಗ ಕುದ್ದ್ ಕಂಡ್ ಕೇಳ್ತಿದ್ದೊ. ಮೆಕಾಲೆ ಎಂಬ ಪೊರ್ಕಿ ಪದ್ಧತಿ ಜಾರಿಗೆ ಬಂದ ಮ್ಯಾಲೆ ಗುರು ನಿಂತ್ ಪಾಠ ಮಾಡ್ದು ಶಿಷ್ಯಂಗ ಬೆಂಚಿಮ್ಯಾಲೆ ಕುದ್ದ್‌ಕಂಡ್ ಕೇಳಿ ಕಲಿವಂಗೆ ಆತ್.

*ಪದ್ಧತಿಗ ಹೆಂಗಿದ್ದೂ ಗುರು ಗುರುನೇ ತಾನೆ?*
*ಗುರುನ ಆಧರಿಸುದು, ನಮ್ಮೆಲ್ಲರ ಕರ್ತವ್ಯ ತಾನೆ?*
*ನೀವ್ ಏನ್ ಹೇಳಿರೇ ನನ್ನ ಕುಲ ಬಾಂಧವರೆ?*

ಬರಹ : ರಂಜಿತ್ ಕೆ. ಎ., ಗಾಳಿಬೀಡು.

14 ನೇ ಪುಟದಿಂದ

ಕಂಡು ಬಂದರೆ ಎಷ್ಟು ಸಮಯ ಮತ್ತು ಹೇಗೆ ಮುಲಾಮುಗಳನ್ನು ಹಚ್ಚಲು ಸಾಧ್ಯ? ಹಾಗಿದ್ದರೆ ವೈದ್ಯಕೀಯ ವಿಜ್ಞಾನದಲ್ಲಿ ಬೇರೇನಾದರೂ ದಾರಿಯಿದೆಯೇ ಎಂಬುದು ಸಹಜವಾಗಿ ಕಾಡುವಂತಹ ಪ್ರಶ್ನೆ. ಈ ರೋಗಗಳಿಂದಾಗಿ ಬಹಳಷ್ಟು ಮಂದಿ ಮಾನಸಿಕವಾಗಿ ಜರ್ಜರಿತರಾಗುತ್ತಾರೆ. ಯಾವುದೇ ಸಾಮಾಜಿಕ, ಕೌಟುಂಬಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವರಿಗೆ ಮುಜುಗರವಾಗುತ್ತದೆ. ಮತ್ತು ಅದನ್ನವರು ಇಚ್ಛಿಸುವುದಿಲ್ಲ. ಇಂತಹ ಮಾನಸಿಕ ಒತ್ತಡಗಳಿಂದಾಗಿ ಸೋರಿಯಾಸಿಸ್ ಅಧಿಕವಾಗುವ ಸಾಧ್ಯತೆ ಇದೆ. ಅಂದರೆ ಸೋರಿಯಾಸಿಸ್ ರೋಗವು ಮನಸ್ಸಿನ ಅಶಾಂತಿ, ನೋವಿನಿಂದಾಗಿ ಆರಂಭವಾಗಬಹುದು ಅಥವಾ ಅಧಿಕವಾಗಬಹುದು. ಈ ಖಾಯಿಲೆ ಗುಣವಾಗುವಲ್ಲಿ ಭರವಸೆ ಮೂಡಿಸಿರುವ ಚಿಕಿತ್ಸೆಯೆಂದರೆ ಪುವ ಚಿಕಿತ್ಸೆ. ಈ ಚಿಕಿತ್ಸೆಯಿಂದ ಸಂಪೂರ್ಣವಾಗಿ ಕಾಯಿಲೆ ಗುಣವಾಗಬಹುದು. ಅಥವಾ ಸಂಪೂರ್ಣ ನಿಯಂತ್ರಣ ದಲ್ಲಿರಬಹುದು. ಆದುದರಿಂದ ಗುಣಮಾಡುವ ಸಾಮರ್ಥ್ಯ ಇರುವ ಪುವ ಚಿಕಿತ್ಸೆಯನ್ನು ಪ್ರಯತ್ನಿಸಲೇಬೇಕು.

### *ತೊನ್ನು*

ತೊನ್ನು ಅಥವಾ ಪಾಂಡುರೋಗ ಎಂಬುದು ಜನರಲ್ಲಿ ಆತಂಕ, ಭಯವನ್ನುಮೂಡಿಸುವಂತಹ ಮತ್ತೊಂದು ಚರ್ಮರೋಗ. ಬಿಳಿ ತೊನ್ನಿನ ಚಿಕ್ಕದಾದ ಕಲೆ ರೋಗಿಯ ದೇಹವಿಡೀ ವ್ಯಾಪಿಸುವುದೇ, ಇದ್ದಂತೆಯೇ ಇರುವುದೇ, ತಾನಾಗಿಯೇ ಗುಣವಾಗುವುದೇ, ಗುಣವಾದ ತೊನ್ನು ಪುನಃ ಕಾಣಿಸಬಹುದೇ ಎಂದು ಹೇಳುವುದು ಕಷ್ಟಕರ. ಬಿಳಿ ಕಲೆ ಬಂದೊಡನೆ ತೊನ್ನು ಎಂದು ಭಾವಿಸಬೇಡಿ. ಬೇರೆ ಅನೇಕ ಚರ್ಮ ರೋಗಗಳಲ್ಲಿ ಬಿಳಿ ಕಲೆ ಬರಬಹುದು. ಆದುದರಿಂದ ಚರ್ಮರೋಗದ ವೈದ್ಯರನ್ನು ಕಂಡೇ ರೋಗಕ್ಕೆ ಚಿಕಿತ್ಸೆಯನ್ನು ತೆಗೆದುಕೊಳ್ಳಬೇಕು.

-ಡಾ. ಪ್ರಸನ್ನ ನರಹರಿ, ಚರ್ಮ ಹಾಗೂ ಲೈಂಗಿಕ ರೋಗಗಳ ತಜ್ಞ, ನಾಯಕ್ ರಸ್ತೆ, ಕಾಸರಗೋಡು.

ಜನಾಂಗದ ಬೆನ್ನೆಲುಬೆ ಪತ್ರಿಕೆ
ಪತ್ರಿಕೆನ ಪ್ರತಿಯೊಬ್ಬರು ಕೊಂಡ್ ಓದಕ್ಕು
ಆಗ ಪತ್ರಿಕೆ ತಂತಾನೆ ಬೆಳ್ದದೆ
ಜನಾಂಗ ಮುಂದ್‌ವರ್ದದೆ
ದೇಶ ಪ್ರಗತಿಯತ್ತ ಸಾಗಿದೆ
ಕೊಡಗು ಸಂಗಾತಿನ ಕೊಂಡ್ ಓದಿಕ್ಕೆ
ಯಾರು ಮರೆಯಕ್ಕಾಗದ್

*ಬಾಲ ಸಂಗಾತಿ ವಿಭಾಗ : ಜ್ಞಾನ -17*

ಶಾಲೇಲಿ ಹೇಳಿಕೊಟ್ಟಿದ್ದೆಲ್ಲಾ ನಿಜ ಅಲ್ಲಾ

## ಮಹಾಭಾರತಲಿರುವ ವೈಜ್ಞಾನಿಕ ಅಂಶಗ

ಮಹಾಭಾರತನ ಪುರಾಣ, ನೀತಿಶಾಸ್ತ್ರ, ತತ್ವಶಾಸ್ತ್ರ, ಭಾರತೀಯ ಇತಿಹಾಸ ಇತ್ಯಾದಿ ಪುಸ್ತಕಗಳ ವಿಶ್ವಕೋಶತೇಳಿ ಪರಿಗಣಿಸುವೆ. ಆದ್ದರಿಂದಲೇ "ಇದರ್ಲಿ ಇರ್ದು ಬೇರೆ ಕಡೆ ಸಿಕುದು, ಇದರ್ಲಿ ಇಲ್ಲದ್ದ್ ಬೇರೆ ಕಡೆ ಸಿಕ್ಕಿಕಿಲೆ"ತ, ತಜ್ಞರ್ ಹೇಳಿವೆ. ವೈಜ್ಞಾನಿಕ ದೃಷ್ಟಿಂದ ವಿಶ್ಲೇಷಿಸಲಾಗಿ ಇಲ್ಲಿ ಹೇಳಲಾದ ಕೆಲವು ವಿಷಯಗಳ ಬಗ್ಗೆ ಸಂದೇಹ ಉಂಟಾದು. ಆದರೆ ಇದರ್ಲಿ ಬಹಳಷ್ಟ್ ವೈಜ್ಞಾನಿಕ ಅಂಶಗಿರ್ದಂತು ಸುಳ್ಳಲ್ಲ. ಖಗೋಲ ಶಾಸ್ತ್ರ, ರಸಾಯನಶಾಸ್ತ್ರ, ಧಾತು ಶಾಸ್ತ್ರ ಇತ್ಯಾದಿಗಳ ಬಗ್ಗೆ ಹಲವು ಬಾರಿ ಇಲ್ಲಿ ಉಲ್ಲೇಖಿಸ್ಯೊಲೊ. ಮಹಾಭಾರತದ ವೈಜ್ಞಾನಿಕ ದೃಷ್ಟಿಂದ ಅಧ್ಯಯನ ಮತ್ತ್ ಪರಿಶೀಲನೆಯಿಂದ ಭಾರತೀಯರ ವೈಜ್ಞಾನಿಕ ಸಾಧನೆಗಳ್ನ ತಿಳ್ಕಣಕ್.

ಮಹಾಭಾರತಲಿ ಉಪಲಭ್ಯವಿರುವ ಈ ಶಾಸ್ತ್ರಗಳಿಗೆ ಸಂಬಂಧಿಸಿದಂಗೆ ಕೆಲವು ಅಂಶಗಳ್ನ ಇಲ್ಲಿ ಉದಾ: ರೂಪಲಿ ನೋಡಿ

*ಭೌತ ಶಾಸ್ತ್ರ (ಪದಾರ್ಥ ಶಾಸ್ತ್ರ) Physics)*

ವಸ್ತುಗ ಅನ್ಯ ವಸ್ತುಗಳಿಗೆ ಸಾಪೇಕ್ಷವಾಗಿ ಚಲಿಸುವ ವಿಚಾರ ಭೌತ ಶಾಸ್ತ್ರಲಿ ತುಂಬಾ ಪ್ರಸಿದ್ಧವಾಗ್ಯುಟ್ಟ್.

ಸೂರ್ಯ ಭೂಮಿನ ಸುತ್ತ ತಿರ್ಗಿದೆ. ಇದಂರ್ದಲೆ ಹಗಲ್ ರಾತ್ರಿಗ ಆದೆ. ಇದ್ ಪ್ರಾಚೀನ ಕಲ್ಪನೆ ಆಗಿತ್ತ್. ಆದರೆ ಈ ಕಲ್ಪನೆ ಸರಿಯಲ್ಲ, ಭೂಮಿನೇ ಸೂರ್ಯನ ಸುತ್ತ ತಿರ್ಗುದುತ ಹದಿನೈದನೆಯ ಶತಮಾನಲಿ ಕೋಪರ್ನಿಕಸ್ ನಿರೂಪಿಸಿತ್. ವಸ್ತುಗ ಅನ್ಯ ವಸ್ತುಗಳಿಗೆ ಸಾಪೇಕ್ಷ ಆಗಿ ಚಲಿಸುದರ್ನಆಧಾರ ಆಗಿಟ್ಟ್‌ಕಂಡ್ ಕೋಪರ್ನಿಕಸ್ ಈ ವಿಷಯನ ಪ್ರತಿಪಾದಿಸಿತ್.

ಗತಿಶೀಲ ವಸ್ತುಗಳಿಗೆ ಆಧಾರ ಆಗಿರುವ ಸ್ಥಿರ ವಸ್ತುನ ನೋಡಿ ಅದೇ ಚಲಿಸುವಂಗೆ ಭ್ರಮೆ ಉಂಟಾದೆ (ಉದಾ: ಚಲಿಸುವ ವಾಹನಲಿ ಕುದ್ದ ಜನಗಳಿಗೆ ರಸ್ತೆ ಬದಿಯ ಮರಗ ಚಲಿಸುವಂಗೆ ಕಂಡದೆ )

ಈ ವಿಚಾರಲಿ ಮಹಾಭಾರತಲಿ ಭಗವಾನ್ ಬಾದಾರಾಯಣರ್ ಬರ್ದ ವಿಷಯ ನಮ್ಮನ ಚಕಿತಗೊಳಿಸಿದೆ.

"ಚಲಂ ಯಥಾ ದೃಷ್ಟಿಪಥಂ ಪರ್ಯೆತಿ ಸೂಕ್ಷ್ಮಂ ಮಹ ದ್ರೂಪಮಿವಾ ಬಿಬಾತಿ.

*ಸ್ವರೂಪಮಾಲೋಚಯತೇ ಚ ರೂಪಂ ಪರಂ ತಥಾ ಬುದ್ಧಿ ಪಥಂ ಪರ್ಯೆತಿ.*

ಮುಂದುವರ್ದರೆ

-ಬಿಟ್ಟೀರ ಚೊಂದಮ್ಮ, ಶಂಭು.

*ಬಾಲ ಸಂಗಾತಿ ವಿಭಾಗ : ಕಥೆ-17*

## ಕರ್ತವ್ಯ ನಿಷ್ಟತೆ

ಮಹಾರಾಜ ವಿಕ್ರಮಾದಿತ್ಯ ಪರಮೋದಾರ ಮತ್ತ್ ಪ್ರಜಾರಂಜಕ ಸನ ಆಗಿತ್ತ್. ಅಂವ ಪ್ರಜೆಗಳ ಕಷ್ಟನ ನಿವಾರಣೆ ಮಾಡಿಕ್ಕಾಗಿ ಯಾಗೋಳು ಎಲ್ಲಾ ಕಡೆ ಅಲೆತ್ತಿತ್ತ್.

ಒಂದು ದಿನ ಕುದ್‌ರೆ ಮೇಲೆ ಕುದ್ದ್‌ಕಂಡ್ ಒಬ್ಬನೆ ಕಾಡ್ ದಾರಿಲಿ ಹೋಗ್‌ತಿತ್ತ್. ಸಾಯಂಕಾಲ ಆಗ್ತಾ ಇತ್ತ್. ಕತ್ತಲಾ ಗುದರ ಒಳಗೆ ಕಾಡ್‌ಂದ ಹೊರಗೆ ಬರಕುತ ಗ್ಯಾನ ಮಾಡ್ತ್. ಆಗ ದೂರಲಿ ಒಂದು ಹಸ್ ಆಕ್ರಂದನ ಮಾಡ್ದು ಕೇಳ್ಸಿತ್. ರಾಜ ಆ ದಿಕ್ಕಿಗೆ ತಿರ್ಗಿ ಹೋತ್.

ಆಗ ಮಳೆಗಾಲ ಆದ್ದರ್‌ಂದ ಹೊಳೆಲಿ ನೀರ್ ತುಂಬಿ ಹರಿಯ್‌ತಿತ್ತ್. ನೆಲ ಎಲ್ಲಾ ಕಡೆ ಕೆಸರ್ ಕೆಸರಾಗಿತ್ತ್. ಗುಂಡಿಗಳ್ಲಿ ನೀರ್ ಕೆಸರ್ ತುಂಬಿಕಂಡಿತ್ತ್. ಇಂತ ಒಂದು ದೊಡ್ಡ ಕೆಸರ್ ಗುಂಡಿಲಿ ಒಂದು ಹಸ್ ಸಿಕ್ಕಿಹಾಕಂಡ್ ಹೊರಗೆ ಬಾಕೆ ಬೊತ್ತದೆ, ಬೊಬ್ಬೆ ಹಾಕ್‌ತಿತ್ತ್. ಇದರ್ನ ನೋಡಿ ರಾಜ ಹಸ್‌ನ ರಕ್ಷಿಸಿಕೆ ತಾನೇ ಕೆಸರ್ ಗುಂಡಿಲಿ ಇಳ್ತ್. ಆದರೆ ಅವಂಗೆ ಒಬ್ಬಂಗೆ ಹಸ್‌ನ ಎತ್ತಿಕೆ ಬೊತ್ತದೆ, ಅವಂಗೂ ಕೆಸರ್‌ಲಿ ಸಿಕ್ಕಿಹಾಕಂಡಂಗೆ ಆಗಿತ್ತ್. ಹಸ್ ಪ್ರಾಣ ಭೀತಿಲಿ ಇನ್ನೂ ಜೋರಾಗಿ ಮರ್ಡಿಕೆ ಶುರು ಮಾಡ್ತ್. ಹಸ್‌ದ್ ಧ್ವನಿ ಕೇಳಿ ಒಂದು ಸಿಂಹ ಅಲ್ಲಿಗೆ ಬಾತ್. ಹಸ್‌ನ ತಿಂಬಕುತ ಗ್ಯಾನ ಮಾಡಿ ಘರ್ಜಿಸಿತ್. ಸಿಂಹನ ಧ್ವನಿ ಕೇಳಿ ಕುದುರೆ ಅಲ್ಲಿಂದ ಪಲಾಯನ ಮಾಡ್ತ್. ಈಗ ಒಬ್ಬನೆ ಆತ್. ಹಸ್‌ನ ಸಿಂಹಂದ ರಕ್ಷಿಸಿಕ್ಕಾಗಿ ಒರೆಂದ ಖಡ್ಗನ ಹೊರಗೆ ತೆಗ್‌ದ್ ಹಿಡ್‌ಕಣ್‌ತ್. ಸಿಂಹ ಮುಂದೆ ಬಂದಂಗೆ ರಾಜ ಖಡ್ಗನ ಆಡ್ಸಿ ಸಿಂಹನ ಹೆದ್ರಿಸ್‌ತ್ತಿತ್ತ್. ಗುಂಡಿ ಹತ್ರ ಒಂದು ದೊಡ್ಡ ಮರ ಇತ್ತ್. ಅಲ್ಲಿ ಒಂದು ಗಿಳಿ ಕುದ್ದ್‌ಕಂಡ್ ಇದನ್ನೆಲ್ಲಾ ನೋಡ್‌ತಿತ್ತ್. ಗಿಳಿ ರಾಜಂಗೆ ಹೇಳ್ತ್. ಮಹಾರಾಜ ಈ ಹಸ್ ಬೆಳಿಗ್ಗೆ ಹೊತ್ತಿಗೆ ಸತ್ತ್‌ಹೋದೆ ನೀನ್ ವೃತಾ ಏಕೆ ತೊಂದರೆ ತಕಂಡಿಯಾ? ಈ ಸಿಂಹ ನಿನ್ನನ ಕೊಲ್ಲಿಕೆ ಮುಂದೆ, ನೀನ್ ಇಲ್ಲಿಂದ ಹೋಗ್, ಪ್ರಾಣ ರಕ್ಷಣೆ ಮಾಡಿಕಾ, ನಿನ್ನ ಪ್ರಾಣ ಬಹಳ ಅಮೂಲ್ಯ ಆದದ್ದ್, ಪ್ರಜೆಗಳಿಗೋಸ್ಕರ ನೀನ್ ಬದ್‌ಕಲೇ ಬೇಕ್, ಈಗ ಒಂದೇ ಸಿಂಹ ಉಟ್ಟು ಸ್ವಲ್ಪ ಹೊತ್ತಿಗೆ ಸಿಂಹಿಣಿ ಮರಿಗ ಎಲ್ಲಾ ಬಂದವೆ ಆಗ ನಿಂಗೆ ಓಡಿಕೆ ಸನ ಆಕಿಲೆತ.

ಗಿಳಿದ್ ಮಾತ್ ಕೇಳಿ ರಾಜ ಹೇಳ್ತ್. ನನ್ನ ಬಗ್ಗೆ ನಿಂಗಿರುವ ಪ್ರೀತಿ ನೋಡಿ ಖುಷಿ ಆತ್. ಆದರೆ ನಂಗೆ ನೀನ್ ಅನೀತಿ ಬೋಧಿಸ್‌ಬ್ಯಾಡ. ಪ್ರಾಣ ರಕ್ಷಣೆಗಾಗಿ ಕ್ರಿಮಿಕೀಟಗ ಸನ ಪ್ರಯತ್ನಿಸುವೆ. ಬೇರೆಯವರ ಜೀವನ ರಕ್ಷಿಸುವವನ ಜೀವನವೇ ಧನ್ಯ. ನನ್ನಿಂದ ಹಸ್‌ನ ಪ್ರಾಣ ಉಳ್ಸಿಕೆ ಅದ್ಯೋ ಇಲ್ಯೊ ಇದ್ ನಂಗೆ ಗೊತ್ತ್‌ಲೆ, ಆದರೆ ಈ ಹಸ್‌ನ ಪ್ರಾಣ ರಕ್ಷಣೆ ಪ್ರಯತ್ನ ನನ್ನ ಕರ್ತವ್ಯತ ಹೇಳ್ತ್. ಬೆಳಿಗ್ಗೆವರೆಗೆ ಗೋರಕ್ಷಣೆ ಕಾಲ ಕಳ್ತ್. ಬೆಳಿಗ್ಗೆ ಹೊತ್ತಿಗೆ, ಸಿಂಹ ರೂಪಲಿ ಇದ್ದ ದೇವೇಂದ್ರ, ಗೋ ರೂಪಲಿದ್ದ ಭೂದೇವಿ, ಗಿಳಿ ರೂಪಲಿದ್ದ ಧರ್ಮ ಎಲ್ಲವೂ ನಿಜ ರೂಪ ತೋರ್ಸಿದೊ. ಅವು ಎಲ್ಲವು ವಿಕ್ರಮಾದಿತ್ಯನ ಶೌರ್ಯನ ತ್ಯಾಗನ ಕೊಂಡಾಡಿ ಅಭಿನಂದಿಸಿದೊ.

ಮುಂದುವರ್ದದೆ.

-ಬಿಟ್ಟೀರ ಚೊಂದಮ್ಮ, ಶಂಭು.

---

ಜ್ಞಾನದ ಕೀರ್ತಿ, ಅದು ಸಾಧನೆಗಳ ಮೂಲಕ ಪ್ರಕಾಶಿಸುವಾಗಲೇ ಪರರಿಗೆ ಗೋಚರವಾಗುತ್ತದೆ.

# ನನಗೂ ಕೊಡಗು ಸಂಗಾತಿಗಿರುವ ಸ್ನೇಹ

ತಾಯಿ ಕೊಟ್ಟ ಜನ್ಮವನ್ನು
ತಂದೆ ಕೊಟ್ಟ ನೀತಿಯನ್ನು
ಗುರು ಕೊಟ್ಟ ವಿದ್ಯೆಯನ್ನು
ಸ್ನೇಹ ಕೊಟ್ಟ ಮಮತೆಯನ್ನು
ಹಾಗೂ ಕೊಡಗು ಸಂಗಾತಿ ಕೊಟ್ಟ
ತಿಳುವಳಿಕೆಯನ್ನು ಮರೆಯದಿರಿ.
ಹೃದಯವೆಂಬ ಗೂಡಿನಿಂದ
ಜೀವ ಎಂಬ ಪಕ್ಷಿಹಾರಿ
ಹೋಗುವ ತನಕ ಎಂದೂ
ಆರದ ಕೊಡಗು ಸಂಗಾತಿ
ಜ್ಯೋತಿಯಾಗಿ ಬೆಳಗುತ್ತಿರಲಿ
ಮರೆಯಲ್ಲಿ ಕನಸು ಕದಡಿ
ಛಿದ್ರವಾದರೂ ಮತ್ತೆ ಮತ್ತೆ
ಕಟ್ಟಿಕೊಳ್ಳುತ್ತದೆ ಕೊಡಗು ಸಂಗಾತಿಯ ನೆನಪು
ಸಂಗಾತಿ ನೀನೂ ನನ್ನ ಈ ಮನಸ್ಸೆಂಬ
ಬಿಳಿ ಕಾಗದದಲ್ಲಿ ಮೂಡಿಸಿದೆ ನಿನ್ನಯ ಹೆಸರು
ಈ ಹೆಸರೇ ನನ್ನ ಉಸಿರಾಗಿದೆ.
ಕಾಲವು ಮೀರಿ ಸಾಗಿತ್ತು
ನಿನ್ನ ಸೌಂದರ್ಯ ನನ್ನ ಮನಸ್ಸನ್ನು ಕಾಡಿತ್ತು.
ನನ್ನ ಹೃದಯದಲ್ಲಿ ಕೊಡಗು ಸಂಗಾತಿಯ
ರೂಪವಾಗಿ ಪರಿವರ್ತಿಸಿತು.
ಕನಸೆಲ್ಲಾ ನೆನಪಾಗಿ
ಆ ನೆನಪೊಂದು ಹಿತವಾದಾಗ
ನೀ ಆಡಿದ ಮಾತು
ಇಂದು ಮಿಂಚು ತರುತಿದೆಯಲ್ಲಾ ಸಂಗಾತಿ
ಮತ್ತೆ ಸಂಗಾತಿ ನಿನ್ನ ನೋಡಬೇಕೆನ್ನುವ
ಹಂಬಲ ಹೆಚ್ಚುತ್ತಿದೆಯಲ್ಲಾ ಕೊ.ಸಂಗಾತಿ
ಹೂವಿನಂತೆ ಅರಳಿ
ವರುಷಗಳಂತೆ ಮರಳಿ
ತಳಿರಂತೆ ಚಿಗುರಿ
ಸಂಗಾತಿ ನಿನ್ನ ಬಾಳು ಹಾಯಾಗಿರಲಿ
ಓ ನನ್ನ ನಲ್ಲ
ಪ್ರಿಯವಾದ ಇನಿಯಾ
ಕೊಡಗು ಸಂಗಾತಿ ನೀ ಇಲ್ಲದೆ ನನ್ನ ಬಾಳು
ಹೇಗಿದ್ದರೂ ನೋವು
ಮಲ್ಲಿಗೆ ಹೂ ಬಾಡದಿರಲಿ
ಬಾಳು ಹಾಯಾಗಿರಲಿ
ಕೊಡಗು ಸಂಗಾತಿ ನಿನ್ನ ನನ್ನ ಪ್ರೀತಿ ಸ್ಥಿರವಾಗಿರಲಿ
ಮಾಣಿಕ್ಯವೆಂಬ ವೀಣೆಯಲ್ಲಿ
ಮಧುರ ಎಂಬ ನಾದವನ್ನು ನುಡಿಸಿ
ಸ್ನೇಹ ಎಂಬ ಧ್ವನಿಯನ್ನು ಕಾಣು ಬಾ ಸಂಗಾತಿ
ಮತ್ತು ಕೊಡುವಳು ಬಂದಳೆಂದು
ತುತ್ತು ಕೊಟ್ಟವಳನ್ನು ಮರೆಯಬೇಕೆ ಕೊ. ಸಂಗಾತಿ
ನೀ ನನ್ನ ಕನಸಿನಲ್ಲಿ ಮೂಡಿ ಬರುವೆ
ಮನಸ್ಸಿನಲ್ಲಿ ಕಾಡುತ್ತಿರುವೆ
ನಗುವಿನಲ್ಲಿ ತೇಲುತ್ತಿರುವೆ
ಹಕ್ಕಿಯಂತೆ ಕೂಗುತ್ತಿರುವೆ
ಓ ನನ್ನ ಕೊಡಗು ಸಂಗಾತಿ
ದುಂಬಿ ಬಯಸುವುದು ಹೂವನ್ನು
ಕವಿ ಬಯಸುವುದು ಕಾವ್ಯವನ್ನು
ತಾಯಿ ಬಯಸುವುದು ಮಗುವನ್ನು
ಆದರೆ ನಾನು ಬಯಸುವುದು ಕೊಡಗು ಸಂಗಾತಿಯನ್ನು
ಗುಡಿಸಿದರೆ ಕಸ ಬರಬಾರದು
ಊಟ ಮಾಡಿದರೆ ಹಸಿವಿರಬಾರದು
ಆದರೆ ಕೊಡಗು ಸಂಗಾತಿಯನ್ನು ಓದಲು
ಮರೆಯಬಾರದು
ಮಾತಿನಂತೆ ಮನವಿರಲಿ
ನುಡಿಯಂತೆ ನಡೆಯಿರಲಿ
ಎಳ್ಳುಬೆಲ್ಲಮೆಲ್ಲುವಲ್ಲಿ
ಕೊಡಗು ಸಂಗಾತಿ ನಿಮ್ಮಲ್ಲಿ ಮೂಡಿ ಬರಲಿ
ಮರಳಿನಲ್ಲಿ ಬರೆದ ಅಕ್ಷರಗಳನ್ನು
ಸಮುದ್ರದ ಅಲೆಗಲಿಂದ ಅಳಿಸಬಹುದು
ಆದರೆ ಕೊಡಗು ಸಂಗಾತಿ ಎಂಬ ಹೃದಯದಲ್ಲಿ ತುಂಬಿದ
ತಿಳುವಳಿಕೆಯನ್ನು ಯಾರಿಂದ ಅಳಿಸಲು ಸಾಧ್ಯವಿಲ್ಲ.

-ಪಟ್ಟಡ ಹಂಸಿ ಸುಬ್ಬಯ್ಯ, ಮೈಸೂರು.

---

# ಹುತ್ತರಿ ಹಬ್ಬ

ಹುತ್ತರಿ ಹಬ್ಬ ಬಾತ್
ಮಕ್ಕಳಿಗೆಲ್ಲಾ ಖುಷಿ ತಾತ್
ಅಪ್ಪ ಮನೆಗೆ ಪಟಾಕಿ ತಾತ್
ಆದರ್ನ ಮಕ್ಕಳೆಲ್ಲಾ ಹೊಟ್ಟಿಸಿ ಆತ್.

ಎಲ್ಲರ ಮನೇಲಿ ತಂಬಿಟ್ಟ್ ತಿಂಡಿ
ಕೆಲವು ಮನೇಲಿ ತರತರ ತಿಂಡಿ
ಮಕ್ಕಳೆಲ್ಲಾ ಒಟ್ಟಿಗೆ ಕೂಡಿ
ಐನ್ ಮನೆಗೆ ಹೋದೊ ನೋಡಿ

ಒಟ್ಟಿಗೆ ಸೇರ್ದೊ ದೊಡ್ಡವರೆಲ್ಲಾ
ದೇವಸ್ಥಾನಕ್ಕೆ ಹೋದೊ ಒಟ್ಟಿಗೆಲ್ಲಾ
ಪೊಲಿ ಪೊಲಿ ಬಾ ಅಂತ ಕರ್ದೊ ಎಲ್ಲಾ
ಕದಿರನ್ನು ತಂದೊ ದೇವಸ್ಥಾನಲಿ ಎಲ್ಲಾ

ದೇವಸ್ಥಾನಂದ ಎಲ್ಲಾ ಮನೆಗೆ ಬಂದೊ
ಐನ್ ಮನೆಗೆ ಎಲ್ಲವು ಸೇರ್ದೊ
ಗದ್ದೆಗೆ ಹೋದೊ ಪೊಲಿ ಪೊಲಿ ಎಂದೊ
ಪೊಲಿ ಪೊಲಿ ಎಂದೊ ಕದಿರನ್ನು ಕೊಯ್ದೊ

ಮನೆಗೆ ಬಂದ್ ನೆರೆ ಕಟ್ಟಿದೊ
ಎಲ್ಲರು ಸೇರಿ ಊಟ ಮಾಡ್ದೊ
ಖುಷಿಯಿಂದ ಅವರವರ ಮನೆ ಸೇರ್ದೊ
ವರ್ಷ ವರ್ಷ ನಡ್ಸಕ್ಕು ಹುತ್ತರಿ ಹಬ್ಬನ.

- ಕುದುಪಜೆ ಜಾನಕಿ ಈಶ್ವರ, ಬೆಂಗಳೂರು.

---

ಬೆವರನ್ನು ಸುರಿಸಿ ದುಡಿದು ಸಂಪಾದಿಸಿದ ಹಣಕ್ಕೆ ಯಾವಾಗಲೂ ಗೌರವ ಹಾಗೂ ಬೆಲೆ ಹೆಚ್ಚು.

## ರೈತರ ಬಾಳಿಗೆ ವರದಾನ ಯಶಸ್ವಿನಿ ಆರೋಗ್ಯ ವಿಮೆ

ಗೌಡ ಜನಾಂಗದ ಏಳಿಗೆಗೆ ಶ್ರಮ ಪಡುತ್ತಿರುವ ಎಲ್ಲಾ ವಿಷಯಗಳನ್ನು ಶೇಖರಿಸಿ ಮನೆ ಬಾಗಿಲಿಗೆ ತಲುಪಿಸುವ ಕೊಡಗು ಸಂಗಾತಿ ಪತ್ರಿಕೆ ಸಂಪಾದಕರಿಗೆ ಯಶಸ್ವಿನಿ ಆರೋಗ್ಯ ವಿಮೆಗೆ ಸೇರುವ ಬಗ್ಗೆ ಹಾಗೂ ಅದರಿಂದ ಆಗುವ ಉಳಿತಾಯದ ಬಗ್ಗೆ ನನಗೆ ತಿಳಿದ ಮಟ್ಟಿಗೆ ತಿಳಿಸಲು ಇಷ್ಟಪಡುತ್ತೇನೆ. ತಾವುಗಳು ಎಲ್ಲಿ ವಾಸವಾಗಿರುವಿರೋ ಅದೇ ಊರಿನಲ್ಲಿ ವ್ಯವಸಾಯ ಸೇವಾ ಸಹಕಾರ ಸಂಘಗಳನ್ನು ಸರ್ಕಾರ ತೆರೆದಿರುತ್ತದೆ. ಅಲ್ಲಿ ಕೆಲಸ ಮಾಡುವ ಆಡಳಿತ ಮಂಡಳಿಯವರನ್ನು ಭೇಟಿ ಮಾಡಿ ಸಂಘಕ್ಕೆ ಸದಸ್ಯರಾಗಿ ನಂತರ ಯಶಸ್ವಿನಿ ಆರೋಗ್ಯ ವಿಮೆಗೆ ಅವರೇ ಸೇರಿಸಿಕೊಳ್ಳುತ್ತಾರೆ. ವರ್ಷಕ್ಕೆ ಒಬ್ಬರಿಗೆ 60-00 ರೂನಂತೆ ಕಟ್ಟಿ ಯಶಸ್ವಿನಿ ಆರೋಗ್ಯ ವಿಮೆ ರಶೀತಿಯನ್ನು ಅವರಿಂದ ಪಡೆದುಕೊಳ್ಳಿ. ನಂತರ ಹೃದಯ, ಗಂಟಲು, ಹೊಟ್ಟೆ, ಕಿಡ್ನಿ ಮೊದಲಾದ ದೊಡ್ಡ ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳಬೇಕಾದ ಸಂದರ್ಭ ಬಂದಲ್ಲಿ ಸಂಘಕ್ಕೆ ಭೇಟಿ ಕೊಟ್ಟು ವಿಷಯ ತಿಳಿಸಿದಾಗ ಅವರು ಕಾರ್ಡ್ ಮತ್ತು ಪತ್ರ ಕೊಡುತ್ತಾರೆ. ನಂತರ ಶಸ್ತ್ರ ಚಿಕಿತ್ಸೆಗೆ 1 ಲಕ್ಷ ರೂ. ವೆಚ್ಚವನ್ನು ಈ ಯಶಸ್ವಿನಿ ಕಾರ್ಡ್ ಭರಿಸುತ್ತದೆ ಹಾಗಾಗಿ ಸೇವಾ ಸಹಕಾರ ಸಂಘಗಳಿಂದ ರೈತರಿಗೆ ತುಂಬಾ ಅನುಕೂಲವಿದೆ.

ಕಳೆದ ಮೂರು ತಿಂಗಳ ಹಿಂದೆ ಸೋಮವಾರ ಪೇಟೆ ತಾಲ್ಲೂಕು ಆಲೂರು ಸಿದ್ದಾಪುರ ಸೇವಾ ಸಹಕಾರ ಸಂಘದಿಂದ ಯಶಸ್ವಿನಿ ಕಾರ್ಡ್‌ನಿಂದ ಯಶಸ್ಸು ಕಂಡ ಕುಟುಂಬ ನಮ್ಮದಾಗಿದೆ. ಕಡ್ಯದ ತಾರಣಯ್ಯರವರ ಹೆಸರಿನಲ್ಲಿ ರೂ 60 ಕಟ್ಟಿ ಆರೋಗ್ಯ ವಿಮೆ ಮಾಡಿದ್ದೆವು. ಕೆಲ ದಿವಸಗಳಲ್ಲಿ ಹೃದಯ ಶಸ್ತ್ರ ಚಿಕಿತ್ಸೆ ಮಾಡಿಸಬೇಕಾಗಿ ಬಂತು. ಒಂದು ಲಕ್ಷ ಹಣದ ಅವಶ್ಯಕತೆಯು ಯಶಸ್ವಿನಿ ಆರೋಗ್ಯ ವಿಮೆಯಿಂದ ನಮಗೆ 1 ಲಕ್ಷ ರೂ ಉಳಿತಾಯವಾಗಿರುತ್ತದೆ. ಗೌಡ ಬಂಧುಗಳು 60 ರೂಪಾಯಿಯಿಂದ ತಮ್ಮ ಜೀವನದಲ್ಲಿ ಉಳಿತಾಯ ಮಾಡಿ ಯಶಸ್ವಿನಿಯಿಂದ ಯಶಸ್ಸನ್ನು ಕಾಣಬಹುದೆಂದು ತಿಳಿಸಲು ಇಚ್ಛಿಸುತ್ತೇನೆ.

ಅಲ್ಲದೆ ನಮಗೆ ಸಕಾಲದಲ್ಲಿ ಸಹಾಯ ಮಾಡಿದಂತಹ ಸಂಘದ ಅಧ್ಯಕ್ಷರಿಗೂ, ಆಡಳಿತ ಮಂಡಳಿಯವರಿಗೂ ನನ್ನ ಧನ್ಯವಾದಗಳು. ಕರ್ನಾಟಕ ರಾಜ್ಯದಲ್ಲಿ ಸುಮಾರು 20 ಲಕ್ಷದಷ್ಟು ಸದಸ್ಯರು ಈಗಾಗಲೇ "ಯಶಸ್ವಿನಿ" ಯೋಜನೆಯಲ್ಲಿ ಸೇರ್ಪಡೆಯಾಗಿದ್ದಾರೆ. ಆದ್ದರಿಂದ ನಮ್ಮ ಬಡ ಜನರು ಇದರ ಸದುಪಯೋಗವನ್ನು ಪಡೆದುಕೊಳ್ಳುವಂತೆ ನನ್ನ ವಿನಮ್ರ ವಿನಂತಿ.

-ಕಡ್ಯದ ಶಾಮಲ ತಾರಣಯ್ಯ, ಮೈಸೂರು

---

### ನಿಧನ :

1. ಸುಂಟಿಕೊಪ್ಪ ಸಮೀಪ ಉಲುಗುಲಿ ಗ್ರಾಮದ ಯಂಕನ ಲೀಲಾಧರನವರು ದಿನಾಂಕ 14-11-2003 ರಲ್ಲಿ ಅಕಾಲಿಕ ನಿಧನಹೊಂದಿದರು. ಶ್ರೀಯುತರಿಗೆ 63 ವರ್ಷವಾಗಿತ್ತು. ಮೃತರು ತಾಯಿ, ಪತ್ನಿ ಇಬ್ಬರು ಹೆಣ್ಣುಮಕ್ಕಳು ಓರ್ವ ಪುತ್ರ ಹಾಗೂ ಅಪಾರ ಬಂಧುವರ್ಗವನ್ನು ಆಗಲಿದ್ದಾರೆ.

2. ಕುಶಾಲನಗರದಲ್ಲಿ ವಾಸವಾಗಿರುವ ಶ್ರೀ ತೋಟಂಬೈಲು ರಘುರವರು (ನಿವೃತ್ತ ವಾಯುಸೇನೆ) ದಿನಾಂಕ 23-11-2003 ರಂದು ನಿಧನರಾದರು. ಅವರಿಗೆ 54 ವರ್ಷ ವಯಸ್ಸಾಗಿತ್ತು.ಮೃತರು ಪತ್ನಿ,ಪುತ್ರ ಹಾಗೂ ಅಪಾರ ಬಂಧುಗಳ ಪಾಲಿಗೆ ಇನ್ನಿಲ್ಲವಾಗಿದ್ದಾರೆ.

3. ಅವಂದೂರು ಗ್ರಾಮದ ಕಾಳೇರಮ್ಮನ ಬಸಪ್ಪನವರು ದಿನಾಂಕ 28-11-2003ರ ಶುಕ್ರವಾರ ದೈವಾಧೀನರಾದರು. ನಿವೃತ್ತ ಅಧ್ಯಾಪಕರಾಗಿದ್ದ ದಿವಂಗತರಿಗೆ 70 ವರ್ಷ ವಯಸ್ಸಾಗಿದ್ದು ಪತ್ನಿ, ಮಕ್ಕಳು ಮತ್ತು ಅಫಾರ ಬಂಧುಬಳಗವನ್ನು ಅಗಲಿದ್ದಾರೆ.

- ಸಂಗಾತಿ

## ವೇತನ ಹೆಚ್ಚಳಕ್ಕೆ ಆಗ್ರಹ

ಮಡಿಕೇರಿ ಶ್ರೀ ಓಂಕಾರೇಶ್ವರ ದೇವಸ್ಥಾನದಲ್ಲಿ ಕಳೆದ 22 ವರ್ಷಗಳಿಂದ ಸಹಾಯಕ ಅರ್ಚಕರಾಗಿ ಸೇವೆ ಸಲ್ಲಿಸುತ್ತಿರುವ 45 ವರ್ಷ ಪ್ರಾಯದ ಶಂಕರ ನಾರಾಯಣ ಹೆಬ್ಬಾರ್ ಎಂಬ ಅರ್ಚಕರು ಮಾತನಾಡಲು ಬಾರದ ಅಂಗವಿಕಲರಾಗಿದ್ದು ತಿಂಗಳಿಗೆ ಕೇವಲ 375 ರೂ. ಪಡೆಯುತ್ತಿದ್ದಾರೆ. ತಾನು ದಿನನಿತ್ಯ ಅಪ್ಪಂಗಳದಿಂದ ಬಸ್ಸಿನಲ್ಲಿ ಬರುವುದರಿಂದ ಆ ಹಣ ಅಲ್ಲಿಗೆ ಸರಿಹೋಗುತ್ತದೆ. ಅದಕ್ಕಾಗಿ ಇತರ ಅರ್ಚಕರಿಗೆ ವೇತನ ಹೆಚ್ಚಿಸಿದಂತೆ ತನಗೂ 1500 ರೂ ಸಂಬಳ ಕೊಡಬೇಕೆಂದು ಸರಕಾರವನ್ನು ಆಗ್ರಹಿಸಿ ಬರೆದ ಪತ್ರದ ಕಟ್ಟುಗಳನ್ನು ಫೋಟೊ ಸಹಿತ ತಂದು ಇದನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದು ಮಡಿಕೇರಿಯ ಎಲ್ಲಾ ಪತ್ರಿಕೆಗಳಲ್ಲು ಈ ವಿಷಯ ಬಂದಿದೆ ಎಂದು ಕೈ ಸನ್ನೆಯಿಂದ ತಿಳಿಸಿದ ಇವರಿಗೆ ದೇವಸ್ಥಾನ ನಿಧಿಯ ಕಾನೂನಿನಂತೆ ವೇತನ ಹೆಚ್ಚಾಗಲಿ ಎಂದು ಹಾರೈಸೋಣಾ.

ವರದಿ - ಸಂಗಾತಿ

---

 ### ಶುಭ ವಿವಾಹ : 

1. ಅವಂದೂರು ಗ್ರಾಮದ ಕಾಳೇರಮ್ಮನ ದಿವಂಗತ ಮುತ್ತಪ್ಪನವರ ಪುತ್ರ ಶಿವಪ್ರಕಾಶ್ ಮತ್ತು ಮರಂಧೋಡ ಗ್ರಾಮದ ಮುಕ್ಕಾಟೀರ ಕಾಳಪ್ಪನವರ ಪುತ್ರಿ ಶಶಿಕಲ ಇವರ ಮದುವೆಯು ದಿನಾಂಕ 1-11-2003 ನೇ ಶನಿವಾರ ವರನ ಸ್ವಗೃಹದಲ್ಲಿ ಹಳೆಯಕಾಲದ ಪದ್ಧತಿಯಂತೆ, ಭಾರೀ ವಿಜೃಂಭಣೆಯಿಂದ ನಡೆಯಿತು.

2. ಮಡಿಕೇರಿಯಲ್ಲಿರುವ ಕೊಡಗು ಗೌಡ ಸಮಾಜದ ಮ್ಯಾನೇಜರ್ ಶ್ರೀ ಚೆಟ್ಟಿಮಾಡ ರಘುಪತಿಯವರ ಮಗಳು ತನುಜಾ ಮತ್ತು ಚೆಟ್ಟಿಮಾನಿಯ ಸೆಟ್ಟೇಜನ ಸುಬ್ಬಯ್ಯನವರ ಪುತ್ರ ಶ್ರೀ ಪ್ರಕಾಶನಿಗೂ ದಿನಾಂಕ 2-11-2003 ನೇ ಭಾನುವಾರ ಮಡಿಕೇರಿಯ ಕೆಳಗಿನ ಗೌಡ ಸಮಾಜ ಕಲ್ಯಾಣ ಮಂಟಪದಲ್ಲಿ ವಿವಾಹವು ವೈಭವದಿಂದ ನಡೆಯಿತು.

3. ಸೋಮವಾರಪೇಟೆ ತಾಲ್ಲೂಕು ರಂಗಸಮುದ್ರ ಗ್ರಾಮದ ಪರ್ಲಕೋಟಿ ದಿವಂಗತ ಭೋಪಯ್ಯನವರ ಪುತ್ರ ಜಯಪ್ರಕಾಶನಿಗೂ ಕೆದಕಲ್ ಗ್ರಾಮದ ಕಾಯರಮಾರ್ ಲೇಟ್ ಬೆಳ್ಯಪ್ಪನವರ ಪುತ್ರಿ ಲೇಖಿಳಿಗೂ ದಿನಾಂಕ 5-11-2003 ನೇ ಬುಧವಾರ ಕುಶಾಲನಗರದ ಕಾಳೇಘಾಟ್ ಕಲ್ಯಾಣಮಂಟಪದಲ್ಲಿ ವಿವಾಹವು ಅದ್ದೂರಿಯಿಂದ ನೆರವೇರಿತು.

4. ಬೆಂಗಳೂರು ನಿವಾಸ ಪೂಜಾರಿರ ಗೋಪಾಲನವರ ಪುತ್ರಿ ಪ್ರಮೀಳಾ ಎಂಬ ವಧುವಿಗೂ ಮತ್ತು ಕೋಳಿಬಯಲು ಪುಟ್ಟಪ್ಪನವರ ಪುತ್ರ ಚಂದನ್ ಎಂಬ ವರನಿಗೂ ದಿನಾಂಕ 27-11-2003 ರ ಗುರುವಾರ ಬೆಂಗಳೂರಿನ ಜೆಸ್ಮಾಭವನದಲ್ಲಿ ಮದುವೆಯು ಶೋಭಾಯಮಾನವಾಗಿ ಜರುಗಿತು.

---

# ವಕ್ರದಂತ ಮತ್ತು ಮುನ್ನೆಚ್ಚರಿಕೆ ವಹಿಸಬೇಕಾದ ಕ್ರಮಗಳು



ಬಿಳಿಮಲೆ ಡಾ. ರತೀಶ್

ವಕ್ರದಂತ ಸಾಮಾನ್ಯವಾಗಿ 10 ರಿಂದ 13 ವರ್ಷದೊಳಗಿನ ವಯಸ್ಸಿನಲ್ಲಿ ಕಂಡು ಬರುತ್ತದೆ. ಈ ವಯಸ್ಸಿನಲ್ಲಿ ಹಲ್ಲಿನ ಮತ್ತು ಮುಖದ ಆಕಾರದಲ್ಲಿ ಬಹಳಷ್ಟು ವ್ಯತ್ಯಾಸ ಕಂಡುಬರುತ್ತದೆ. ಮೇಲಿನ ಮತ್ತು ಕೆಳಗಿನ ಕೋರೆ ಹಲ್ಲು ಬಂದ ನಂತರ ಮಕ್ಕಳ ಮುಖ ಚರ್ಯೆಯಲ್ಲಿ ಬದಲಾವಣೆಗಳಾಗುತ್ತವೆ. ಇದೇ ಸಮಯದಲ್ಲಿ ಹಲ್ಲಿನ ಅಂತರವೂ ಕಡಿಮೆಯಾಗಿ ಒಟ್ಟೊಟ್ಟಿಗೆ ಪೋಣಿಸಿ ಬಂದಂತಿರುತ್ತದೆ. ಹಲ್ಲಿನ ಅಂದವೂ ಹೆಚ್ಚುತ್ತದೆ.

ಶತಮಾನಗಳು ಉರುಳಿದಂತೆಲ್ಲಾ ಮನುಷ್ಯನಲ್ಲಿ ಹಲವಾರು ಮಾರ್ಪಾಡುಗಳಾಗುತ್ತಾ ಸಾಗಿದೆ. ಹಿಂದಿನ ಕಾಲದ ಮನುಷ್ಯರ ದವಡೆಗೆ ಹೋಲಿಸಿದಲ್ಲಿ ಈಗಿನ ಜನಾಂಗದವರ ದವಡೆಯ ಆಕಾರ ಮತ್ತು ಅದರ ಸುತ್ತಳತೆಯು ಬಹಳ ಕಡಿಮೆಯಾಗುತ್ತಾ ಸಾಗಿದೆ. ಇದಕ್ಕೆ ಮುಖ್ಯ ಕಾರಣ ಆಹಾರದಲ್ಲಿ ದಿನನಿತ್ಯದ ಬದಲಾವಣೆಗಳು. ಆಗಿನ ಕಾಲದ ಹಲ್ಲಿನ ಗಾತ್ರವೂ ದೊಡ್ಡದಾಗಿದ್ದು, ಹಲ್ಲುಗಳು ಸರಿಯಾದ ಕ್ರಮದಲ್ಲಿ ಬಂದು ನಿಲ್ಲಲು ದವಡೆಯ ಗಾತ್ರವೂ ದೊಡ್ಡದಾಗಿತ್ತು. ದವಡೆಯ (Jaw size) ಗಾತ್ರ ಸಣ್ಣದಾದಂತೆಲ್ಲಾ ಹಲ್ಲುಗಳು ತನ್ನ ಜಾಗದಲ್ಲಿ ಮೇಲೆ ಬರಲಾಗದೆ ಇನ್ನಾವುದೋ ಹಲ್ಲಿನ ಪಕ್ಕದಲ್ಲಿ ಅಥವಾ ಹಲ್ಲು ಅಲ್ಲೇ (Tooth Impaction) ತಳ ಭಾಗದಲ್ಲಿ ಉಳಿದುಕೊಳ್ಳಬೇಕಾಗುತ್ತದೆ. ಇದರಿಂದ ಮುಂದೆ ಹಲ್ಲು ಮೇಲೆ ಬರಲಾಗದೆ ಪಕ್ಕದ ಹಲ್ಲುಗಳನ್ನು ಸವೆಸುತ್ತಾ ಅಥವಾ ನೋವು ಕಾಣಿಸಿಕೊಂಡು ಒಳಗಡೆ ದವಡೆಯನ್ನು ಕರಗಿಸುತ್ತಾ ದೊಡ್ಡದಾಗಿ ಸಾಗಿ ಮುಂದೆ ತುಂಬಾ ತೊಂದರೆ ಅನುಭವಿಸಬೇಕಾಗುತ್ತದೆ. ಈ ರೀತಿಯ ತೊಂದರೆಗಳಿಗೆ ಸಣ್ಣ ಮಟ್ಟಿನಲ್ಲಿ ಶಸ್ತ್ರ ಚಿಕಿತ್ಸೆ ಮಾಡಿ ತೆಗೆಯಬೇಕಾಗುತ್ತದೆ. ಸಾಮಾನ್ಯವಾಗಿ ಕೊನೆಯ ದವಡೆ ಹಲ್ಲು (Canine tooth) ಇವುಗಳಲ್ಲಿ ತೊಂದರೆ ಕಾಣಿಸಿಕೊಳ್ಳುತ್ತದೆ.

***ವಕ್ರದಂತ ಮತ್ತು ಕಾರಣಗಳು :***

1. ಅತಿಯಾದ ಹುಳುಕು ಹಲ್ಲು ಇಲ್ಲು ಹಲ್ಲು ಇದ್ದು ಹೋಗಬೇಕಾದ ಸಮಯದ ಮುಂಚೆ ಹಲ್ಲು ಬಿದ್ದು ಹೋದಲ್ಲಿ ಮುಂದೆ ಬರುವ ಹಲ್ಲುಗಳು (Permanent Tooth) ಈ ಜಾಗವನ್ನು ಆಕ್ರಮಿಸಿಕೊಳ್ಳುತ್ತವೆ.
2. ದವಡೆಯ ಆಕಾರ ಮತ್ತು ಸುತ್ತಳತೆಯಲ್ಲಿ ವ್ಯತ್ಯಾಸ ಕಂಡುಬಂದರೆ
3. ಕ್ಲಿಪ್ತ ಸಮಯದಲ್ಲಿ ಹಾಲು ಹಲ್ಲುಗಳು ಉದುರಿ ಹೋಗದಲ್ಲಿ ಪರ್ಮನೆಂಟ್ ಹಲ್ಲುಗಳು ಬೇರೆ ಕಡೆ ಹುಟ್ಟುತ್ತವೆ.
4. ಕೆಲವು ಅಭ್ಯಾಸಗಳು ವಕ್ರದಂತತೆಗೆ ಕಾರಣವಾಗುತ್ತದೆ (Habits Leading to Maloeclusion) ಇವು ಮಕ್ಕಳಲ್ಲಿ ಕಂಡು ಬರುತ್ತವೆ.

***a) ಹೆಬ್ಬೆಟ್ಟು, ಬೆರಳು ಚೀಪುವುದರಿಂದ :*** (ಸಾಮಾನ್ಯವಾಗಿ ಮಕ್ಕಳಲ್ಲಿ ಕಂಡುಬರುತ್ತದೆ.) ಈ ಅಭ್ಯಾಸವು ಕೆಲವರಲ್ಲಿ ಮಗುವಿಗೆ ಎರಡುವರೆ ವರ್ಷ ತುಂಬಿದ ನಂತರವೂ ಮುಂದುವರಿಯುತ್ತದೆ. ಹೀಗಿದ್ದಲ್ಲಿ ಮೇಲಿನ ದಂತ ಪಂಕ್ತಿ ಮತ್ತು ದವಡೆಯು ಮುಂದಕ್ಕೆ ಚಾಚಿಕೊಳ್ಳುತ್ತದೆ. ಕೆಳಗಿನ ದಂತ ಪಂಕ್ತಿಹಾಗೂ ದವಡೆಯು ಒಳಚಾಚಿಕೊಂಡಿರುತ್ತದೆ.

***b. ತುಟಿ ಕಚ್ಚುವುದರಿಂದ : (Lip Biting)*** ಮೇಲಿನ ದಂತ ಪಂಕ್ತಿಯು ಅತೀ ಮುಂದಕ್ಕೆ ಮತ್ತು ಕೆಳಗಿನ ದಂತ ಪಂಕ್ತಿಯು ಅತೀ ಹಿಂದಕ್ಕೆ ಚಾಚಿಕೊಳ್ಳುತ್ತದೆ.

***c. ನಾಲಿಗೆಯನ್ನು ಕಚ್ಚುವುದರಿಂದ (Tongue Biting):*** ಮಗುವು ನಾಲಿಗೆಯನ್ನು ಮೇಲಿನ ಮತ್ತು ಕೆಳಗಿನ ದಂತ ಪಂಕ್ತಿಯ ಮಧ್ಯದಲ್ಲಿ ಮುಂದುಗಡೆ ಚಾಚಿ ಇಡುತ್ತಾ ಮುಂದುವರಿದಲ್ಲಿ, (ಸಾಮಾನ್ಯವಾಗಿ ನಿದ್ದೆಯಲ್ಲೂ ಮುಂದು ವರಿಯುತ್ತದೆ. ಇದರಿಂದ) ಮೇಲಿನ ದಂತ ಪಂಕ್ತಿಯು ಮುಂದಕ್ಕೆ ಚಾಚಿಯೂ ಮತ್ತು ದಂತ ಪಂಕ್ತಿಯ ಮಧ್ಯ ಭಾಗ (Midline Diastema) ಬರಬಹುದು. ಇದರಿಂದ ದವಡೆ ಭಾಗ ಉಬ್ಬಾದಂತೆಯೂ ಮತ್ತು ಮುಂದೆ ಮೇಲಿನ ಮತ್ತು ಕೆಳಗಿನ ತುಟಿಗಳನ್ನು ಸೇರಿಸಲು ಕಷ್ಟ ಪಡಬೇಕಾಗುತ್ತದೆ.

***c.ಬಾಯಿಯಲ್ಲಿ ಉಸಿರಾಡುವುದರಿಂದ (Mouth Breathing):*** ಇದು ಹೆಚ್ಚು ಕಮ್ಮಿ ದೊಡ್ಡವರಲ್ಲೂ ಕಾಣಬಹುದು. ಇವರ ಮುಖವು ಉದ್ದವಾಗಿಯೂ ಮತ್ತು ಹಲ್ಲುಗಳು ಮುಂದಕ್ಕೆ ಚಾಚಿಕೊಂಡಿರುತ್ತದೆ. ಕೆಲವರ ಮೂಗಲ್ಲಿ ದುರ್ಮಾಂಸ ಬೆಳೆದು ಅಥವಾ ಇನ್ನಾವುದೋ ಕಾರಣದಿಂದ, ಅಭ್ಯಾಸ ಬಲದಿಂದಲೂ ಬಾಯಲ್ಲಿ ಉಸಿರಾಡುತ್ತಾರೆ. ಇದರಿಂದ ಬಾಯಲ್ಲಿ ಸುಲಭವಾಗಿ ರೋಗಾಣುಗಳು ಸಂಚರಿಸಿ ವಸಡಿನ ತೊಂದರೆ ಮತ್ತು ಗಂಟಲಿನ ಕಾಯಿಲೆಗಳಿಗೆ ಈಡಾಗುತ್ತಾರೆ.

***ಮುನ್ನೆಚ್ಚರಿಕೆ ವಹಿಸಬೇಕಾದ ಕ್ರಮಗಳು :***

1. ಮುಖ್ಯವಾಗಿ ಪೋಷಕರು ಮಕ್ಕಳ ಕಡೆಗೆ ಗಮನ ಕೊಡಬೇಕಾಗುತ್ತದೆ. ಹಲ್ಲು ಬೀಳುವ ಮತ್ತು ಹುಟ್ಟುವ ಸಮಯದಲ್ಲಿ ಅವುಗಳಲ್ಲಿ ವ್ಯತ್ಯಾಸ ಕಂಡು ಬಂದರೆ ವೈದ್ಯರನ್ನು ಭೇಟಿಯಾಗಿ, ಸರಿಯಾದ ಸಮಯದಲ್ಲಿ ಚಿಕಿತ್ಸೆಯನ್ನು ಪಡೆದುಕೊಂಡರೆ ವಕ್ರದಂತವಾಗುವುದನ್ನು ತಡೆಹಿಡಿಯಬಹುದು.
2. ಮಕ್ಕಳು ಆಟ ಆಡುವಾಗ ಹಾಲು ಹಲ್ಲಿನ (Decidious Tooth) ಜಾಗಕ್ಕೆ ಬಲವಾದ ಏಟು ಬೀಳದಂತೆ ಮುನ್ನೆಚ್ಚರಿಕೆ ವಹಿಸಿ. ಇದರಿಂದ ಮುಂದೆ ಬರುವ ಹಲ್ಲು (Permanent)

ಆರೋಗ್ಯವಾಗಿಯೂ ಇರುತ್ತದೆ.

3. ಮೇಲೆ ತಿಳಿಸಿದ ಅಭ್ಯಾಸಗಳು ಮಗುವಿನ ವಯಸ್ಸು ಎರಡುವರೆ ವರ್ಷ ಆದ ನಂತರವೂ ಮುಂದುವರಿದಲ್ಲಿ ವೈದ್ಯರನ್ನು ಭೇಟಿಯಾಗಿ ಸೂಕ್ತ ಚಿಕಿತ್ಸಾ ವಿಧಾನಗಳನ್ನು ಅನುಸರಿಸಿ.

4. ಹಲ್ಲುಗಳು ಸರಿಯಾದ ಜಾಗದಲ್ಲಿ ಬರದೆ ಇನ್ನಾವುದೋ ಸ್ಥಳದಲ್ಲಿ ಬಂದರೆ ಕೂಡಲೇ ವೈದ್ಯರನ್ನು ಭೇಟಿ ಮಾಡಿ.

5. ಹುಳುಕು ಹಲ್ಲುಗಳು ಇದ್ದರೆ ವೈದ್ಯರ ಸಲಹೆ ಮೇರೆಗೆ ಚಿಕಿತ್ಸೆಯನ್ನು ಪಡೆಯಿರಿ, ಇದರಿಂದ ಹಲ್ಲು ಬೇಗನೆ ಬಿದ್ದು ಹೋಗುವುದನ್ನು ತಡೆಹಿಡಿಯಬಹುದು.

***ಚಿಕಿತ್ಸಾ ವಿಧಾನಗಳು :*** ವಕ್ರದಂತೆಯನ್ನು ಸರಿಪಡಿಸಲು ಹಲವಾರು ಚಿಕಿತ್ಸಾ ಕ್ರಮಗಳು ಲಭ್ಯವಿವೆ.

1. ಮೊದಲನೆಯದಾಗಿ ವಕ್ರದಮತೆಯ ತೀವ್ರತೆಯನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಕಾಣುವ ತೆಗೆಯಲು ಆಗದಂತ ತಂತಿಯನ್ನು (Fixed appliance) ಅಳ ವಡಿಸಿರುತ್ತಾರೆ. ಇದು 1 ವರ್ಷದಿಂದ ಒಂದೂವರೆ ವರ್ಷ ದವರೆಗೂ ಮುಂದುವರೆಯುತ್ತದೆ.

ತೆಗೆದು ಹಾಕುವ ತಂತಿಯನ್ನು (Remouable appliance) ಕೂಡ ಅಳವಡಿಸಬಹುದು. ಎಲ್ಲವೂ ನಿಮ್ಮ ದಂತ ರಚನೆಯನ್ನು ಅವಲಂಬಿಸಿರುತ್ತದೆ. ಚಿಕಿತ್ಸೆಯಲ್ಲಿ ಮೇಲಿನ ಮತ್ತು ಕೆಳಗಿನ ಹಲ್ಲುಗಳನ್ನು (Premolars) ತೆಗೆಯಬೇಕಾಗುತ್ತದೆ. ಹೀಗೆ ಮಾಡುವುದರಿಂದ ಸಾಕಷ್ಟು ಸ್ಥಳಾವಕಾಶ ಸಿಕ್ಕಿ ಹಲ್ಲುಗಳನ್ನು ಸರಿಯಾದ ಜಾಗದಲ್ಲಿ ಜೋಡಿಸಲು ಅನುಕೂಲವಾಗುತ್ತದೆ.

2. ಕೆಲವೊಂದು ಬಾರಿ ವಕ್ರದಂತದೊಂದಿಗೆ ಬಾಯಿಯ ಮತ್ತು ಮುಖದ ಆಕಾರವೂ ವಿಲಕ್ಷಣವಾಗಿರುತ್ತದೆ. (Skeletal Deformity)ಇಂಥ ಸಮಯದಲ್ಲಿ ತಜ್ಞ ವೈದ್ಯರೂ ಸೇರಿದಂತೆ ವಕ್ರದಂತ ಚಿಕಿತ್ಸೆಯ ಜೊತೆ ಬಾಯಿಯ ದವಡೆಯ ಶಸ್ತ್ರ ಚಿಕಿತ್ಸೆಯನ್ನೂ ಮಾಡಬೇಕಾಗುತ್ತದೆ. (Plastie Surgery) ಇದರಿಂದ ಮುಖದ ಅಂದವೂ ಹೆಚ್ಚಾಗುತ್ತದೆ. ಆದರೆ ಚಿಕಿತ್ಸೆಯ ವೆಚ್ಚವೂ ದುಬಾರಿಯಾಗಿರುತ್ತದೆ.

-ಡಾ. ರಿತೇಶ್.

---

## ವಿ. ವಿ.ಗೆ 8 ನೇ ರ್‍ಯಾಂಕ್

ಸಿ. ಎಂ. ಮೋಹನ್ ಕುಮಾರ್ ಎಂಬ ಪುತ್ತೂರು ಸಂತ ಫಿಲೋಮಿನಾ ಕಾಲೇಜಿನ ವಿದ್ಯಾರ್ಥಿ, 2002-03 ನೇ ಸಾಲಿನಲ್ಲಿ ನಡೆದ ಬಿ. ಕಾಂ. ಪರೀಕ್ಷೆಯಲ್ಲಿ ಮಂಗಳೂರು ವಿಶ್ವ ವಿದ್ಯಾನಿಲಯಕ್ಕೆ 8 ನೇ ರ್‍ಯಾಂಕ್ ಗಳಿಸಿರುತ್ತಾರೆ. (85.41%) ಇವರು ಕೊಡಗಿನ ಬಲಮುರಿ ಗ್ರಾಮದ ಚೀಯಪನ ಮೋಟಯ್ಯ ಜಲಜಾಕ್ಷಿಯವರ ಪುತ್ರರಾಗಿರುತ್ತಾರೆ.

-ಸಂಗಾತಿ.

# ಕೊಡಗು ಗೌಡ ಒಕ್ಕೂಟದವರಿಂದ ಪ್ರವಾಸ

ಕೊಡಗು ಗೌಡ ಮಹಿಳಾ ಒಕ್ಕೂಟ ಮಡಿಕೇರಿ ಇವರಿಂದ ಪ್ರತಿವರ್ಷದಂತೆ ಮಹಿಳೆಯರಿಗಾಗಿ ಪ್ರವಾಸ ಏರ್ಪಡಿಸಲಾಗಿತ್ತು. 22 ಜನ ಮಹಿಳೆಯರನ್ನು ಹೊತ್ತ ಪಾಣತಲೆ ಸೋಮಪ್ಪ (ಮಂಡಿರ ಶಶಿ) ನವರ ಮಿನಿ ಬಸ್ಸು ನವಂಬರ್ 13 ರ ಬೆಳಿಗ್ಗೆ 6 ಗಂಟೆಗೆ ಮಡಿಕೇರಿಯ ಶ್ರೀ ಓಂಕಾರೇಶ್ವರ ದೇವಸ್ಥಾನದಿಂದ ಹೊರಟು ಹಳೇಬೀಡು - ಬೇಲೂರು - ಮೂಡಿಗೆರೆ ಮಾರ್ಗವಾಗಿ ಕಳಸ ಹೊರನಾಡಿನ ಅನ್ನ ಪೂರ್ಣೇಶ್ವರಿ ದೇವಾಲಯದಲ್ಲಿ ತಂಗಿ, ಅಂದಿನ ಕಾರ್ತಿಕ ಮಾಸದ ದೀಪಾರಾಧನೆ ದೇವಿ ಬಲಿ ಬರುವುದು. ತೇರಿನ ಸೇವೆಯಲ್ಲಿ ಭಾಗವಹಿಸಿ, ಮಾರನೆ ದಿನ ಬೆಳಿಗ್ಗೆ ಶೃಂಗೇರಿಯ ಶಾರದಾಂಬೆಗೆ ಸೀರೆ ಹೂ ಒಪ್ಪಿಸಿ ಆಗುಂಬೆಯ ಚಾರ್ಮುಡಿ ಘಾಟ್, ಉಡುಪಿ, ಮಣಿಪಾಲ, ಕುಂದಾಪುರ ಮಾರ್ಗವಾಗಿ ಆನೆಗುಡ್ಡ ಗಣಪತಿಯನ್ನು ಕಂಡು ಮಧ್ಯಾಹ್ನ ಅಲ್ಲಿ ಊಟ ಮುಗಿಸಿ ಕೊಲ್ಲೂರಿಗೆ 3-30 ಕ್ಕೆ ತಲಪಿ ದೇವಿಯ ದರ್ಶನ ಪಡೆದಾಗ ಒಟ್ಟಿಗೆ 530 ಕಿ. ಮೀ. ದೂರವನ್ನು ಕ್ರಮಿಸಿತು. ವಾಪಾಸು ಬಿ.ಸಿ ರೋಡ್ ಸುಳ್ಯ ಮಡಿಕೇರಿಯನ್ನು ಅದೇ ದಿನ ಅಂದರೆ 15ರ ಬೆಳಿಗ್ಗೆ 4 ಘಂಟೆಗೆ ತಲಪಿ ಸುರಕ್ಷಿತವಾಗಿ ಎಲ್ಲರನ್ನು ಅವರವರ ಮನೆ ತಲಪಿಸಿದ ಜವಾಬ್ದಾರಿಯ ಶ್ರೀ ಶಶಿಯವರದಾಗಿತ್ತು.

ಒಟ್ಟಿಗೆ ಈ ಪ್ರವಾಸವು 806 ಕಿ. ಮೀ ಗಳಾಗಿದ್ದು 44 ಘಂಟೆಗಳು ಆಗಿದ್ದರೂ ವೆಚ್ಚ ಒಬ್ಬರಿಗೆ 400 ರೂ. ಮಾತ್ರವೇ ಆಗಿತ್ತು.

ಇದೇ ರೀತಿ ಗೌಡ ಜನಾಂಗದ ಪ್ರತಿ ಸಂಘದವರೂ ಜೀವನದಲ್ಲಿ ಒಮ್ಮೆಯಾದರೂ ಶೃಂಗೇರಿ ತಿರುಪತಿಯ ದರ್ಶನ ಮಾಡಲು ಯಾತ್ರಾ ಪ್ರವಾಸಗಳನ್ನು ಕೈಗೊಳ್ಳಬೇಕೆಂಬುದು ನಮ್ಮ ಬಯಕೆ. ಇದರಿಂದ ಬಡವರಿಗೂ ಅವಕಾಶ ಸಿಕ್ಕುತ್ತದೆ.

ಹಾಗೂ ಇನ್ನು ಮುಂದೆ ಪ್ರತಿ ತಿಂಗಳ ಮೊದಲ ಶುಕ್ರವಾರ 2-30 ಘಂಟೆಗೆ 1/2 ಘಂಟೆ ಕಾಲ ಮಡಿಕೇರಿ ಆಕಾಶ ವಾಣಿಯಲ್ಲಿ ಅರೆಭಾಷೆಯ ಕಾರ್ಯಕ್ರಮ ಹಾಗೂ 1/2 ಘಂಟೆ ಮಹಿಳಾ ಲೋಕ ಕಾರ್ಯಕ್ರಮವನ್ನು ಕನ್ನಡದಲ್ಲಿ ಕೊಡಲು ಅವಕಾಶ ಒದಗಿಸಿದ್ದಾರೆ ಆದ್ದರಿಂದ ಇದರ ಸದುಪಯೋಗವನ್ನು ನಮ್ಮ ಎಲ್ಲಾ ಬಾಂಧವರು ಪಡೆದುಕೊಳ್ಳಬೇಕಾಗಿ ವಿನಂತಿಸುತ್ತೇನೆ.

*ವಿ. ಸೂ. : ಅರೆಗನ್ನಡ ಭಾಷಾ ಕಾರ್ಯಕ್ರಮವು ಕೊ. ಗೌ. ಸಾಂಸ್ಕೃತಿಕ ಅಕಾಡೆಮಿಯ ಹೆಸರಿನಲ್ಲಿ ರುವುದು.*

ವರದಿ: ಬೈತಡ್ಕ ಜಾನಕಿ

---

## 1837 ರಲ್ಲಿ ಬ್ರಿಟಿಷರ ವಿರುದ್ಧ "ಕೆನರಾ ಬಂಡಾಯ"ಯೋಧರ 166 ನೇ ವರ್ಷದ ಪುಣ್ಯಸ್ಮರಣೆ



*ಚಿತ್ರದಲ್ಲಿ :*
ಶ್ರೀಕಾಂತ್ ವಾಲಗದ್ - ಜಿಲ್ಲಾಧಿಕಾರಿಗಳು
ಶ್ರೀ ಗುಡ್ಡೆಮನೆ ರಮೇಶ್ - ಸಂಚಾಲಕರು
ಶ್ರೀ ಎಂ. ಯು. ಅಚ್ಚಣ್ಣ-ಸ್ವಾತಂತ್ರ್ಯ ಹೋರಾಟಗಾರರು
ಶ್ರೀ ಹೂದಿಹಾಳ್-ಮುಖ್ಯ ಕಾರ್ಯದರ್ಶಿ
ಶ್ರೀ ಡಿ. ಎಸ್. ಮಾದಪ್ಪ-ಮಾಜಿ ಶಾಸಕರು
ಶ್ರೀ ಪಂಜಿಪಳ್ಳಿ ವೆಂಕಪ್ಪ -ನಿರ್ದೇಶಕರು, ಗೌಡ ಸಮಾಜ
ಶ್ರೀ ಬೇಕಲ್ ಜಯರಾಂಗೌಡ - ಅಧ್ಯಕ್ಷರು, ಗೌಡ ಸಮಾಜ, ಭಾಗಮಂಡಲ
ಶ್ರೀ ಹೊಸೂರು ರಮೇಶ್ ಜೋಯಪ್ಪ -ಅಧ್ಯಕ್ಷರು, ಗೌಡ ವಿದ್ಯಾಸಂಘ, ಕೊಡಗು
ಶ್ರೀ ವಿಧ್ಯಾದರ್, ಬೇಕಲ್ ರಮಾನಾಥ್, ಬೈಮನ ವಿಶ್ವನಾಥ್

---

**48ನೇ** ಕರ್ನಾಟಕ ರಾಜ್ಯೋತ್ಸವ - **2003** ರ ಅಂಗವಾಗಿ ಬೆಂಗಳೂರಿನಲ್ಲಿ ಏರ್ಪಡಿಸಿದ ಮಕ್ಕಳ ಮೇಳ ದಲ್ಲಿ ಕಣ್ಣು ಕೋರೈಸುವ ಮಕ್ಕಳ ನಾಟ್ಯೋತ್ಸವದ ದೃಶ್ಯ : ನೃತ್ಯ ಆಯೋಜನೆ : ಅಮ್ಮಾಜೀರ ಪೊನ್ನಪ್ಪ, ಕಾವೇರಿನಾಡ, ಬೆಂಗಳೂರು.




---



2003ರ ನವಂಬರ್ 1 ರಂದು , ಬೆಂಗಳೂರಿನ ಶ್ರೀ ಕಂಠೀರವ ಕ್ರೀಡಾಂಗಣದಲ್ಲಿ ಅಮ್ಮಾಜಿರ ಪೊನ್ನಪ್ಪನವರ ಸಾರಥ್ಯದಲ್ಲಿ ಒಂದು ಸಾವಿರದ ಅರವತ್ನಾಲ್ಕು ಮಕ್ಕಳನ್ನು ಒಗ್ಗೂಡಿಸಿ ಮಾಡಿದ ನಾಟ್ಯೋತ್ಸವ ನೋಡುಗರಿಗೆ ಮುದ ನೀಡಿತ್ತು. 35 ನೃತ್ಯಗಳಲ್ಲಿ 9 ಆಯ್ಕೆಯಾಗಿ ಅದರಲ್ಲಿ ಕೊಡಗು ಮನೆತನಗಳ ಹೆಸರು ಹೊತ್ತ ಹಾಡು ಹುತ್ತರಿಯ ಹಾಗೂ ಸುಗ್ಗಿಯನ್ನು ಬಿಂಬಿಸುವ ನೃತ್ಯ ಪ್ರೇಕ್ಷಕರ ಮನತಣಿಸಿತು.

ನಾಟ್ಯೋತ್ಸವದಲ್ಲಿ ಕಾವೇರಮ್ಮಳಾಗಿ ರಂಜಿಸಿದ
ಕು|| ಧೃತಿ ಪೊನ್ನಪ್ಪ

Reg. No. KA/SK/MYS/88/2003 - 05 RNI No. : 10-01-96 TCI Kar. 09592

## ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ - ಬೆಂಗಳೂರು.
## ದಿನಾಂಕ 12-10-2003 ರ ಮುಕ್ತಾಯ ಸಮಾರಂಭದ ಪಕ್ಷಿನೋಟ



ಸಮಾರಂಭವನ್ನು ಉದ್ಘಾಟನೆಗೊಳಿಸುತ್ತಿರುವ ಮುಖ್ಯ ಅತಿಥಿಗಳು



ವೇದಿಕೆಯಲ್ಲಿ ಉಪಾಧ್ಯಕ್ಷ ತಿಮ್ಮಪ್ಪಗೌಡ, ಮಡಿಕೇರಿ ಪುರಸಭಾಧ್ಯಕ್ಷೆ ಕೂಡಕಂಡಿ ಕಾವೇರಮ್ಮ, ಡಾ. ಸುಕುಮಾರ ಗೌಡ ಹಾಗೂ ಸುದರ್ಶನ ಕಾರ್ಲೆ.



ತಮ್ಮ ಶ್ರೇಷ್ಠ ವಾಕ್ಚಾತುರ್ಯದಿಂದ ಸರ್ವರನ್ನು ಮಂತ್ರ ಮುಗ್ಧಗೊಳಿಸಿದ ಡಾ. ಸುಕುಮಾರ ಗೌಡರು



ಸುದರ್ಶನ್ ಕಾರ್ಲೆಯವರಿಗೆ ಸನ್ಮಾನ



ಪ್ರತಿಭಾ ಪುರಸ್ಕಾರ ನೀಡುತ್ತಿರುವ ಡಾ. ನಂಗಾರು ಸುಕುಮಾರ ಗೌಡರು



ಬಾಂಧವರ ಸಮ್ಮಿಲನ

**Kodagu Sangathi** Kannada Fortnightly Edited, Published, Printed by **Pattada Sheelamani, # 12058 "Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.**
And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.